# ಪ್ರತೀಕಾರ

ನಾಟಕ



'ಶ್ರೀರಂಗ'

ನವಯುಗಕ್ಕೊಪ್ಪುವ ಮುದ್ರಾಮಂದಿರ

# ನವಯುಗ ಪ್ರೆಸ್

ಪಾಲುಕೋಟೆ : : ಉಡುಪಿ.

ಎಲ್ಲ ತರದ ಮುದ್ರಣ ಕಾರ್ಯಗಳೂ
ಸ್ವೀಕರಿಸಲ್ಪಡುವವು.

ಮ್ಯಾಲಕರು:

**ನವಯುಗ ಎಂಟರ್‌ಪ್ರೈಸ್ ಲಿಮಿಟೆಡ್**
ಉಡುಪಿ.

**ಕೆ. ಎಚ್. ಶೆಟ್ಟಿ,**
ಮೆನೇಜಿಂಗ್ ಡೈರೆಕ್ಟರ್.

**ಕೆ. ಜೆ. ಬಲ್ಲಾಳ್,**
ಚೆಯರ್‌ಮ್ಯಾನ್.

# ಪ್ರತೀಕಾರ

ಪೌರಾಣಿಕ ನಾಟಕ

'ಶ್ರೀರಂಗ'

0-8-0

"ಪ್ರತಿಕಾರ"ದ ಪ್ರಕಟನಾಧಿಕಾರವನ್ನು ಪಡೆದಿದ್ದ ಶ್ರೀ ಕೆ. ಹೊನ್ನಯ್ಯ ಶೆಟ್ಟರು ಅದನ್ನು 1939ರಲ್ಲಿ 'ಭಾರತೀ ಗ್ರಂಥಮಾಲೆ'ಯ ಒಂದು ಮಣಿಯಾಗಿ ಪ್ರಕಟಿಸುವ ವ್ಯವಸ್ಥೆ ಮಾಡಿದ್ದರು. ಇದೀಗ ಅದರ ಪ್ರತಿಗಳು ಮುಗಿದಿರುವುದರಿಂದಲೂ 'ಭಾರತೀ ಗ್ರಂಥಮಾಲೆ'ಯು ನಿಲ್ಲಿಸಲ್ಪಟ್ಟಿರುವುದರಿಂದಲೂ ದ್ವಿತೀಯ ಮುದ್ರಣವು 'ನವಭಾರತ ಪುಸ್ತಕ ಭಂಡಾರ'ದ ಮೂಲಕ ಪ್ರಕಟವಾಗಿದೆ. ಇದರ ಪ್ರಕಾಶನಕ್ಕೆ ಕಾರಣರಾದ ಶ್ರೀ ಶೆಟ್ಟರಿಗೂ ಆಗಿನ ಮತ್ತು ಈಗಿನ ಪ್ರಕಾಶಕರಿಗೂ ನಾನು ಆಭಾರಿಯಾಗಿರುವೆ.

—ಲೇಖಕ.

## —* ಕಥಾ ಸಾರಾಂಶ *—

ಧರ್ಮರಾಯನ ಅಶ್ವಮೇಧ ಯಾಗಾರ್ಥವಾಗಿ ಅರ್ಜುನ, ಪ್ರದ್ಯುಮ್ನ, ವೃಷಕೇತು, ಮೇಘವರ್ಣಾದಿ ವೀರರು ಅಶ್ವವನ್ನು ಹಿಂಬಾಲಿಸುತ್ತ ಮಾಹಿಷ್ಮತೀಪುರಕ್ಕೆ ಬರಲು ಆ ಪುರಪರಸನಾದ ನೀಲಧ್ವಜನು ಕುದುರೆಯನ್ನು ಕಟ್ಟಿಯುದ್ಧ ಮಾಡಲು ಪರಾಭವವನ್ನು ಹೊಂದಿ, ಪುತ್ರರನ್ನು ಕಳೆದುಕೊಂಡು, ಸಂಧಿಮಾಡಿಕೊಳ್ಳಲು ಸನ್ನದ್ಧನಾಗುವನು. ಆದರೆ ಅವನ ಪತ್ನಿಯಾದ ಜ್ವಾಲೆಯು ಅದಕ್ಕೊಪ್ಪದೆ, ತನ್ನ ಪತಿಯು ಪುನಃ ಯುದ್ಧಮಾಡಬೇಕೆಂದು ಪ್ರೇರೇಪಿಸಲಾ ನೀಲಧ್ವಜನು ಸಮ್ಮತಿಸದೆ ಅರ್ಜುನನನ್ನು ಸೇರಿಕೊಂಡು ಮಣಿಪುರದ ಕಡೆಗೆ ನಡೆಯುವನು.

ಇತ್ತಲಾ ಜ್ವಾಲೆಯು ಮನಗುಂದದೆ ಅರ್ಜುನನನ್ನು ಕೊಲ್ಲಿಸಲು ತಕ್ಕ ಉಪಾಯವನ್ನು ಹುಡುಕುತ್ತ, ತನ್ನಣ್ಣನಾದ ಉನ್ಮುಖನ ಮರೆಹೋಗಲು, ಅವನು ಅರ್ಜುನನ ಸಂಗಡ ಯುದ್ಧಮಾಡಲೊಪ್ಪದೆ ತಂಗಿಯನ್ನು ಹಿಂದಕ್ಕೆ ಕಳುಹುವನು. ಆಗಲಾ ಜ್ವಾಲೆಯ ಕೋಪವು ಹೆಚ್ಚಾಗಿ ಅರ್ಜುನನನ್ನು ಸಂಹರಿಸಬೇಕೆಂಬ ಹಠಸಾಧನೆಯಿಂದ ಗಂಗೆಯನ್ನುದ್ರೇಕಿಸಿ ಅವಳಿಂದ ಅರ್ಜುನನಿಗೆ ಶಾಪವನ್ನು ಕೊಡಿಸಿ, ತಾನು ಗಂಗೆಯುರಮನೆಗೆ ಹೊರಟುಹೋಗುವಳು.

ಮಣಿಪುರದಲ್ಲಿ ಅರ್ಜುನನ ಹೆಂಡಂದಿರಾದ ಚಿತ್ರಾಂಗದೆ ಉಲೂಪಿಯರು ಅರ್ಜುನನನ್ನು ಧ್ಯಾನಿಸುತ್ತಲಿದ್ದು, ಬಭ್ರುವಾಹನನಿಂದ ಕಾಗದ ಬರೆಯಿಸಿ ಅರ್ಜುನನನ್ನು ಕರೆಯಿಸಿಕೊಳ್ಳಲು ಸನ್ನಾಹಮಾಡುತ್ತಿರಲಾ ಅರ್ಜುನನ ಯಜ್ಞಾಶ್ವವು ಮಣಿಪುರವನ್ನು ಹೊಕ್ಕು ಲೂಟಿಮಾಡುತ್ತಿರಲು ಬಭ್ರುವಾಹನನು ಅದನ್ನು ಕಟ್ಟಿಹಾಕಿಸಿ, ದೊಡ್ಡ ಸಭೆ ಸೇರಿಸಿ ಮರುದಿನದ ಯುದ್ಧಸನ್ನಾಹವನ್ನಾಲೋಚಿಸುತ್ತಿರಲಾ ಚಿತ್ರಾಂಗದೆಯು ಸಭಾಸ್ಥಾನವನ್ನು ಪ್ರವೇಶಿಸಿ, ಅರ್ಜುನನು ತನ್ನ ಗಂಡನೆಂದೂ, ಆತನನ್ನು ತಕ್ಕ ಸನ್ಮಾನದಿಂದ ಕರೆಯಿಸಿಕೊಳ್ಳಬೇಕೆಂದೂ, ತಾವೆಲ್ಲರೂ

ಮರುದಿನ ಅವನನ್ನು ಕರತರಲು ಹೋಗಬೇಕೆಂದೂ ಸೂಚಿಸಲು, ಹಾಗೆಯೇ ಬಭ್ರುವಾಹನನು ನಿರ್ಧರಿಸಿ ಮರುದಿನ ಅರ್ಜುನನ ಭೇಟಿಗೆ ಹೋಗಲು, ಆತನು ಬಭ್ರುವಾಹನನು ತನ್ನ ಮಗನಲ್ಲವೆಂದೂ, ಉಲೂಪಿ ಚಿತ್ರಾಂಗದೆಯರು ತನ್ನ ಸತಿಯರಲ್ಲವೆಂದೂ ಹೀಯಾಳಿಸಿ ಉಪೇಕ್ಷಿಸಲು, ಬಭ್ರುವಾಹನನು ಯುದ್ಧಕ್ಕೆ ನಿಲ್ಲಲುದ್ರೇಕಿಸುವನು. ಬಭ್ರುವಾಹನನು ತಾನು ಅರ್ಜುನನ ಮಗನಾಗಿದ್ದರೆ, ಆತನನ್ನು ಮರುದಿನ ಸಂಹರಿಸುವೆನೆಂದು ಪ್ರತಿಜ್ಞೆ ಮಾಡಿ, ಹಾಗೆಯೇ ಅರ್ಜುನನನ್ನೂ ವೃಷಕೇತುವನ್ನೂ ಸಂಹರಿಸುವನು. ಈ ವರ್ತಮಾನವನ್ನು ತಿಳಿದು ಉಲೂಪಿ ಚಿತ್ರಾಂಗದೆಯರು ಪ್ರಲಾಪಿಸಲಾ ಬಭ್ರುವಾಹನನು ಉಲೂಪಿಯ ಮಾತಿನಂತೆ ನಾಗಲೋಕದಿಂದ ಸಂಜೀವನ ಮಣಿಯನ್ನು ತಂದು, ಮಡಿದವರೆಲ್ಲರೂ ಜೀವಿತರಾಗುವಂತೆ ಮಾಡುವನು. ಆಗ ಗಂಗಾದೇವಿಯು ಜ್ವಾಲೆಯ ಸಂಗಡ ಬಂದು, ಜ್ವಾಲೆಯನ್ನು ನೀಲಧ್ವಜನಿಗೊಪ್ಪಿಸಿ, ಹರಸಿ ಹೊರಟುಹೋಗುವಳು.

---

## — ಪಾತ್ರಪರಿಚಯ —

---

**ಗಂಡಸರು—**

1. ನೀಲಧ್ವಜ— ಮಾಹಿಷ್ಮತೀಪುರದರಸ
2. ಬಭ್ರುವಾಹನ— ಮಣಿಪುರದರಸ
3. ಅರ್ಜುನ— ಪಾಂಡವರಲ್ಲೊಬ್ಬ
4. ವೃಷಕೇತು— ಕರ್ಣನ ಮಗ
5. ಮೇಘವರ್ಣ— ಹಿಡಂಬಿಯ ಮೊಮ್ಮಗ
6. ಕೃಷ್ಣ— ದ್ವಾರಕಿಯರಸ
7. ಆದಿಶೇಷ— ನಾಗರಾಜ
8. ಮರುತ್ಮಂತ— ಬಭ್ರುವಾಹನನ ಸೇನಾಪತಿ
9. ಪುಂಡರೀಕ— ನಾಗರಲ್ಲೊಬ್ಬ
10. ಅಂಬಿಗ

**ಹೆಂಗುಸರು--**

1. ಜ್ವಾಲೆ— ನೀಲಧ್ವಜನ ಹೆಂಡತಿ
2. ಗಂಗಾದೇವಿ— ಭೀಷ್ಮನ ತಾಯಿ
3. ಚಿತ್ರಾಂಗದೆ— ಬಭ್ರುವಾಹನನ ತಾಯಿ
4. ಉಲೂಪಿ— ಆದಿಶೇಷನ ಮಗಳು
5. ರುಕ್ಮಿಣಿ— ಕೃಷ್ಣನ ಹೆಂಡತಿ

ಸಭಿಕರು, ಸಾಮಂತರು, ಪರಿಚಾರಕರು, ಪರಿಚಾರಿಕೆಯರು, ಪೌರವರು, ಯಜ್ಞಾಶ್ವ.

**ಸ್ಥಳ**—ಮಾಹಿಷ್ಮತೀಪುರ, ಮಣಿಪುರ, ನಾಗಲೋಕ, ಯುದ್ಧರಂಗ, ಅಂತಃಪುರ, ಉದ್ಯಾನ, ಶಿಬಿರ.

# ಪ್ರತೀಕಾರ

## ನಾಟಕ

### ದೃಶ್ಯ ೧

[ಮಾಹಿಷ್ಮತೀಪುರದ ಉಪವನ, ಜ್ವಾಲೆ ಮತ್ತು ನೀಲಧ್ವಜ]

ನೀಲಧ್ವಜ—(ರೋಷದಿಂದ) ಜ್ವಾಲೆ! ಸಾಕಿನ್ನು; ಬಾಯ್ಮುಚ್ಚು! ನಿನ್ನ ಮಾತುಗಳನ್ನು ಮನ್ನಿಸಿದುದರಿಂದ ತೀರಾ ಅನರ್ಥವಾಯಿತು!

ಜ್ವಾಲೆ—(ಕೋಪದಿಂದ) ನನ್ನಿಂದ ಅನರ್ಥವೇ? ಕ್ಷತ್ರಿಯರು ತಮ್ಮ ಅಸುವಳಿಯುವ ತನಕ ಯುದ್ಧಮಾಡುವರೇ ಹೊರತು ತಮ್ಮ ರಾಜ್ಯವನ್ನೂ ಭಾರ್ಯಾಪುತ್ರರನ್ನೂ ಶತ್ರುಗಳ ಸೆರೆಗೊಡ್ಡರು. ನಮ್ಮ ಪುತ್ರರು ಹಸುಳೆಯರಾದರೂ ಕದನದಲ್ಲಿ ಹೋರಾಡಿ ವೀರಸ್ವರ್ಗವನ್ನೈದಿದರು. ಸಾಕು, ಸಾಕು. ನಿಮ್ಮ ಬಡಿವಾರವೆಲ್ಲವೂ ಬಯಲಾಯಿತು. ಅರ್ಜುನನೆಂದ ಮಾತ್ರಕ್ಕೆ ನಮ್ಮ ದೇಶ-ಕೋಶಗಳನ್ನು ಅವನಿಗೊಪ್ಪಿಸಿ ಅವನ ಪರಿಚಾರಕರಂತೆ ವರ್ತಿಸಬೇಕೇ? ನಿಮ್ಮ ಖಡ್ಗ-ಕವಚಗಳನ್ನಿತ್ತ ಕೊಡಿರಿ. ನಾನಾದರೂ ಯುದ್ಧಮಾಡಿ ರಾಜ್ಯವನ್ನು ಸಂಪಾದಿಸಿಕೊಳ್ಳುವೆನು.

ನೀಲಧ್ವಜ—ಛಿ! ದುಷ್ಟೆ! ನಿನ್ನಲ್ಲಿ ಅಹಂಕಾರವು ಚೆನ್ನಾಗಿ ಮನೆ ಮಾಡಿದೆ. ಅಪಾರವಾದ ಸೈನ್ಯವನ್ನು ಕಟ್ಟಿಕೊಂಡು ಬಂದು, ಯುಕ್ತಿಯಲ್ಲಿ ನಿಪುಣನಾದ ಕೃಷ್ಣನೇ ಬೆಂಗಾವಲಿಗಿದ್ದು ಸ್ವತಃ ಶೂರನಾದ ಆ ಅರ್ಜುನನ ಸಂಗಡ ಯುದ್ಧಮಾಡುವುದು ಸುಲಭಸಾಧ್ಯವೇ? ಪಾಕಶಾಸ್ತ್ರವೇ ತಿಳಿಯದ ಹೆಂಗುಸರಿಗೆ ಯುದ್ಧಧರ್ಮವು ತಿಳಿಯುವ ಬಗೆ ಹೇಗೆ?

ಜ್ವಾಲೆ—ಸಾಕು, ಸಾಕು. ಇಂದಿಗೆಲ್ಲವೂ ಬಯಲಾಯಿತು. ಪುರುಷದೇಹವನ್ನು ಧರಿಸಿರುವ ನಾರೀ ಜನ್ಮವಿದು. ಸ್ತ್ರೀಯರಾದರೂ ಮರಣಕ್ಕಂಜುವಂತಿಲ್ಲ. ಆದರೆ ನೀವು ಮಾತ್ರ ನಿಮ್ಮ ಪ್ರಾಣವನ್ನು ಕಾಪಾಡಲುದ್ಯುಕ್ತರಾಗಿರುತ್ತೀರಿ. ಸ್ವಗೌರವವೆಂಬುದು ನಿಮ್ಮಲ್ಲಿ ಎಳ್ಳಷ್ಟು ಇಲ್ಲದಿರುವುದು ಇಂದೀಗ ಸ್ಪಷ್ಟವಾಯಿತು.

ನೀಲಧ್ವಜ—ಹುಚ್ಚೀ! ನಿನ್ನ ಮೂರ್ಖಸ್ವಭಾವವನ್ನು ತ್ಯಜಿಸು. ಲೋಕೈಕವೀರನಾದ ಧನಂಜಯನ ಸಂಗಡ ಹೋರಾಡುವುದರಿಂದ ಅಷ್ಟು ಕಷ್ಟಗಳು ಸಂಭವಿಸುವುವಲ್ಲದೆ ಜಯಲಕ್ಷ್ಮಿಯು ನಮ್ಮ ಕೈಸೇರಳು. ನಿನ್ನೆಯ ಯುದ್ಧದ ವಿಷಯಗಳೆಲ್ಲಾ ನಿನಗೆ ಸ್ಪಷ್ಟವಾಗಿ ತಿಳಿದಿವೆ. ಒಂದು ಜಾವದೊಳಗಾಗಿ ನಮ್ಮ ಸೈನ್ಯವನ್ನು ಕೊಚ್ಚಿಕೊರೆದು, ನುಚ್ಚುನೂರಾಗಿ ಮಾಡಿ, ನಮ್ಮ ಕೋಟೆ-ಕಂದಕಗಳನ್ನು ಪ್ರವೇಶಿಸಿ ನಮಗೆ ಪರಾಭವ ವನ್ನುಂಟುಮಾಡಿದ ಫಲ್ಗುಣನ ಸಂಗಡ ಹೋರಾಡಲಸಾಧ್ಯವು. ನಾನೇ ಹುಚ್ಚನು. ನಿನ್ನ ಮಾತನ್ನಾಲಿಸಿದುದರಿಂದಂತೂ ಈ ಕಷ್ಟನಷ್ಟಗಳು ಪ್ರಾಪ್ತವಾದುವು! ಯಜ್ಞಾಶ್ವವನ್ನರ್ಪಿಸಿ ಧರ್ಮರಾಯನ ಯಾಗಕ್ಕೆ ಸಹಾಯಕನಾಗುವೆನೆಂದು ಮೊದಲೇ ಅರಿಕೆಮಾಡಿದ್ದರೆ ನನಗೆ ಹಾನಿ ಯೇನೂ ತಟ್ಟುತ್ತಿರಲಿಲ್ಲ. ಹೆಂಗುಸರ ಮಾತನ್ನು ಕೇಳುವ ಗಂಡುಸು ಇದೇ ರೀತಿಯಲ್ಲಿ ಎಲ್ಲಾ ಸೌಖ್ಯಸಂಪತ್ತನ್ನು ಕಳೆದುಕೊಳ್ಳದಿರನು. ಮೊನ್ನೆಯ ದಿನ ಅಗ್ನಿಯು ಸೂಚಿಸಿದಂತೆ ಪಾರ್ಥನ ಸಂಗಡ ಸ್ನೇಹಬೆಳಸಿ ದಿಗ್ವಿಜಯಕ್ಕನುಕೂಲನಾಗಿದ್ದರೆ, ಈ ಅನರ್ಥಗಳು ಸಂಭವಿಸುತ್ತಿದ್ದುವೇ! ಇಲ್ಲ. ಈಗ ಮಿಂಚಿದ ಕಾರ್ಯಕ್ಕೆ ಹಂಬಲಿಸಿ ಫಲವೇನು? ನಾನಾದರೋ ಆ ಶ್ರೀಕೃಷ್ಣಪರಮಾತ್ಮನನ್ನು ಕಾಣಲು ಆತುರನಾಗಿರುವೆನು. ನನ್ನ ಧನ-ಕೋಶ-ಸೈನ್ಯಗಳ ಸಂಗಡ ಪಾರ್ಥನನ್ನು ಸೇರಿಕೊಂಡು ಶ್ರೀಕೃಷ್ಣ ನನ್ನು ಕಾಣುವ ಪ್ರಯತ್ನಮಾಡುವೆನು. ನಿನಗಿಷ್ಟವಿದ್ದರೆ ನಿನ್ನ ಅಸೂಯೆ -ಅಮರ್ಷಗಳನ್ನು ತ್ಯಜಿಸಿ ನನ್ನ ಸಂಗಡ ಬಾ. ಇಲ್ಲವಾದರೆ ಈಗಲೇ ಇಲ್ಲಿಂದ ಹೊಂಡು. ನಿನ್ನ ಮುಖವನ್ನೆಂದಿಗೂ ತೋರಬೇಡ.

ಜ್ವಾಲೆ—ಆ ಗೋಪಾಲನನ್ನು ಕಾಣಹೋಗುವುದೇ? ಪರನಾರಿಯ ರನ್ನು ಮೋಹಿಸಿ ಭಂಗಪಡಿಸಿದ ಆ ಗೋವಳನನ್ನು ಕಾಣಲು ನಾನೆಂದೂ ಬರಲಾರೆನು. ಇಷ್ಟವಿರುವುದಾದರೆ ನೀವೇ ನಿಮ್ಮ ಲಜ್ಜೆಯಿಲ್ಲದ ಮುಖ ವನ್ನು ಅವನಿಗೆ ತೋರಿಸಿರಿ. ಪಾರ್ಥನು ಮಡಿಯುವ ವರೆಗೆ ನಾನು ಇಲ್ಲಿಯೇ ಇರುವೆನು. ಅಲ್ಲಿವೇ ವೀರರನ್ನು ಕರೆಯಕಳುಹಿಸಿ ಯುದ್ಧ ಮಾಡಿಸುವೆನು. ನನ್ನ ಪುತ್ರರ ಪ್ರಾಣವಾಯುವನ್ನು ಹೀರಿದಾ ದುಷ್ಟ ಪಾರ್ಥನನ್ನು ನೋಡಲು ನನ್ನ ಕಣ್ಣುಗಳೆಂದೂ ಎಳಸವು.

ನೀಲಧ್ವಜ—ಹಾಗಾದರೆ ನೀನು ಇಲ್ಲಿಯೇ ಇರುವೆಯಾ? ಇಲ್ಲಿರಲು ನಿನ್ನನೆಂದೂ ಬಿಡಲಾರೆನು. ಈಗಲೇ ಇಲ್ಲಿಂದ ಹೊರಡು. ನಿನ್ನ ಮುಖವೆಂದೆಂದಿಗೂ ನೋಡಲರ್ಹವಾದುದಲ್ಲ. ನಾನೀಗಲೇ ಹೊರಡುವೆನು.

ಜ್ವಾಲೆ- (ಉದ್ವೇಗದಿಂದ) ನಿಮ್ಮಂಥ ಗಂಡುಸರಿದ್ದರೆ ಇದೇ ಗತಿ; ಇನ್ನು ನಾನಿಲ್ಲಿರುವೆನೇ? ಲೋಕೈಕವೀರನಾದರೇನು? ಪಾರ್ಥನು ಅಮರನೇ? ಅವನ ರುಂಡವು ಭೂಮಿಯಲ್ಲುರುಳುವ ತನಕ ನನಗೆ ಶಾಂತತೆ ಇರದು. ನನ್ನ ಪುತ್ರರ ರಕ್ತಕಣಗಳು ಮುಯ್ಯನ್ನು ತೀರಿಸಲು ಯುದ್ಧರಂಗದಲ್ಲಿ ಮೊರೆಯಿಡುತ್ತಿರುವವು. ಅದೋ! ವೀರಸ್ವರ್ಗದಲ್ಲಿರುವ ನನ್ನಾ ವೀರಪುತ್ರರು ಪಾರ್ಥನ ರುಂಡವನ್ನೇ ತೋರಿಸುತ್ತಿರುವರು. ಹೋಗಿರಿ; ಹೋಗಿರಿ; ನಿಮ್ಮ ಗಂಡುಸುತನವು ಈಗಲೀಗ ತಿಳಿಯಿತು. ನಾನೂ ಇಲ್ಲಿ ನಿಲ್ಲೆನು. ನನ್ನ ಸೇಡನ್ನು ತೀರಿಸಿಕೊಳ್ಳುವ ಬಗೆಯನ್ನು ಹೊಂಚಲು ಹೋಗುವೆನು. ತಕ್ಕ ಪ್ರತೀಕಾರವನ್ನು ಮಾಡಲು ತೆರಳುವೆನು. ಪಾರ್ಥನು ವೀರನಹುದು. ಆದರೆ, ಅನ್ಯಾಯವಾಗಿ ರಾಜ್ಯವನ್ನು ನುಗ್ಗಿ, ದೇಶ ಕೋಶಗಳನ್ನು ಕಸಿದುಕೊಂಡು, ದೇಶದ ಶಾಂತತೆಯನ್ನು ಅಲ್ಲೋಲಕಲ್ಲೋಲವಾಗಿ ಮಾಡಿ, ಪ್ರಜೆಗಳಿಗೆ ನಿರ್ವ್ಯಾಜವಾಗಿ ಹಿಂಸೆಕೊಡುವವನು ವೀರನೆಂದೆನಿಸಿಕೊಳ್ಳುವನೇ? ಅವನ ವೀರತ್ವಕ್ಕೆ ಧಿಕ್ಕಾರವಿರಲಿ! ಕ್ಷೇಮವಾಗಿ ತಮ್ಮ ಕರ್ಮಗಳಲ್ಲನುರಕ್ತರಾಗಿ ಪರರ ಗೊಡವೆಗೆ ಹೋಗದ ಚಿಕ್ಕ ರಾಜ್ಯಗಳು ಅವನ ಧಾಳಿಯಿಂದ ಬೆಂಗಾಡಾಗಿ ಅನೇಕ ಸಂಕಟಗಳಿಗೆ ತುತ್ತಾಗಿರುವವು. ಆತನಿಗೆಲ್ಲರೂ ಅಡಿಯಾಳಾಗಬೇಕಂತೆ. ಇರಲಿ, ಈ ಜ್ವಾಲೆಯು ಎಂದಿಗೂ ಅವನ ಅಡಿಯಾಳಾಗಳು. ಈ ಅರಮನೆಯೇ ನನಗೆ ಕಾರಾಗೃಹದಂತೆ ತೋರುತ್ತಿದೆ. ಪರಕೀಯರದಾದ ನಂತರ ನಮ್ಮ ಭವನವೂ ನಮಗೆ ಕಾರಾಗೃಹವೇ ಸರಿ. ಆದರೆ- ನಾನೀಗೆಲ್ಲಿಗೆ ಹೋಗಲಿ? (ಆಲೋಚಿಸಿ) ಓಹೋ ನನ್ನ ತಮ್ಮ ಉನ್ಮುಖನು ಇರುವನಲ್ಲವೇ? ಅವನಲ್ಲಿ ಹೋಗಿ ನನ್ನ ಕಷ್ಟವನ್ನು ಹೇಳಿಕೊಳ್ಳುವೆನು. ಅವನಾದರೂ ನನಗೆ ಸಹಾಯಮಾಡುವನೋ ನೋಡುವೆನು.

---

## ದೃಶ್ಯ ೨

### ಗಂಗಾತೀರ.

[ಜ್ವಾಲೆಯು ಪ್ರವೇಶಿಸಿ, ನದಿಯನ್ನು ನೋಡಿ ನಿಲ್ಲುವಳು.]

ಜ್ವಾಲೆ—(ಸ್ವಗತ) ನನ್ನ ದುರದೃಷ್ಟಕ್ಕೇನೆನ್ನಬೇಕು! ಕಷ್ಟ ಕಾಲದಲ್ಲಿ ನನ್ನ ಸೋದರನೂ ನನಗೆ ನೆರವಾಗದೆ ಹೋದನು. ಆ ಹೇಡಿ ಉನ್ಮುಖನು ನನ್ನ ತಂದೆ ರಣಕೇಸರಿಗೆ ಮಗನೆಂತಾದನೋ! ತಿಳಿಯೆ. ಅವನ ಜನ್ಮಕ್ಕೆ ಧಿಕ್ಕಾರವಿರಲಿ! ಅವನು ಕೃಷ್ಣನ ಭಕ್ತನಂತೆ—ಅಹುದು. ಅಂಜುಬುರುಕರಾದವರು ಭಕುತರೆಂಬ ಅಭಿಧಾನದಿಂದ ದಾಸ್ಯದ ನೊಗಕ್ಕೆ ಹೆಗಲೊಡ್ಡಲೇ ಬೇಕು ಇರಲಿ. (ನದಿಯ ಕಡೆಗೆ ತಿರುಗಿ) ಯಾರಲ್ಲಿ? ಅಂಬಿಗರಿರಾ! ಅಂಬಿಗರಿರಾ! (ಅಂಬಿಗನೊಬ್ಬನು ಓಡಿ ಬರುವನು, ಜ್ವಾಲೆಯ ರೋಷಾವೇಶದ ಮುಖವನ್ನು ಭಯಭ್ರಾಂತನಾಗಿ ನೋಡುವನು.) ಎಷ್ಟು ಹೊತ್ತು ನಿಮ್ಮನ್ನು ಕಾದಿರಬೇಕು? ಈ ಗಂಗಾಜಲ ಕಣಗಳು ನನ್ನ ಮೈಗೆ ಸೋಂಕದಂತೆ ನನ್ನನ್ನು ಆ ತಡಿಗೆ ಮುಟ್ಟಿಸಬೇಕು.

ಅಂಬಿಗ—ಇದೇನು ತಾಯಿ! ಈ ಗಂಗಾಜಲದಲ್ಲಿ ಕಾಲಿಟ್ಟ ಕೂಡಲೇ ಮಹಾಪಾಪಗಳು ಹೋಮಕುಂಡದಲ್ಲಿ ಬಿದ್ದ ಆಜ್ಯದಂತೆ ಉರಿದುಹೋಗುವವು. ಪಾಪಾತ್ಮರಾದ ಸಗರಪುತ್ರರ ಸ್ಮಶಾನಭೂಮಿಗಾಗಿ ಹರಿದು, ಅವರನ್ನೆಲ್ಲಾ ಸ್ವರ್ಗಕ್ಕೆ ಕಳುಹಿ, ಬ್ರಹ್ಮಾಂಡವನ್ನೆಲ್ಲಾ ಪವಿತ್ರವಾಗಿ ಮಾಡಿದ ಈ ಗಂಗೆಯ ಜಲವು ನಿಮ್ಮನ್ನು ಸೋಂಕಬಾರದೆನ್ನುತ್ತೀರಿ; ನೀವೆಂಥ ಹುಚ್ಚಿ ತಾಯಿ!

ಜ್ವಾಲೆ—ಎಲೋ ಮೂಢನೇ! ಬಾವಿಯೊಳಗಿರುವ ಮಂಡೂಕದಂತೆ ಪ್ರಪಂಚಜ್ಞಾನವು ನಿನಗೆಲ್ಲಿರುವುದು? ಗಂಗೆಯು ದೋಷಭರಿತಳು, ಅಪವಿತ್ರಳು. ಇವಳ ಜಲವು ನನ್ನ ಶರೀರವನ್ನು ಮುಟ್ಟಬಾರದು.

ಅಂಬಿಗ—ಅಮ್ಮಾ! ನೀವೇನೋ ಬಹಳ ತಿಳಿದವರಂತೆ ಮಾತಾಡುತ್ತೀರಿ. ಅವಳೇ ಭೂಲೋಕಕ್ಕೆ ತಾಯಿ. ಲಕ್ಷಾನುಲಕ್ಷ ಜನರು ಅವಳಿಗೆ ಅನುನಿತ್ಯವೂ ಕಾಣಿಕೆಗಳನ್ನಿತ್ತು, ತಮ್ಮ ಪಾಪಗಳನ್ನೆಲ್ಲಾ ಅವಳ ಪವಿತ್ರವಾದ ನೀರಿನಲ್ಲಿ ತೊಳೆದು, ನಾಶಪಡಿಸಿ, ತಂತಮ್ಮ ಮನೆಗಳಿಗೆ ಹಿಂತಿರುಗು

ವರು. ವಿಷ್ಣುವಿನ ಪಾದದಿಂದ ಜನಿಸಿ, ಈಶ್ವರನ ಜಟೆಯನ್ನು ತೋಯಿಸಿ ಭೂಲೋಕವನ್ನೇ ಪವಿತ್ರವನ್ನಾಗಿ ಮಾಡಿದ ಗಂಗೆಯ ಮೇಲೆ ಯಾಕಮ್ಮ ಸುಮ್ ಸುಮ್ಮನೆ ಅಪವಾದಗಳನ್ನು ಹೊರಿಸುತ್ತಿರುವಿರಿ? ಅವಳೇ ನಮ್ಮ ತಾಯಿ; ಅವಳೇ ನಮ್ಮ ಪಾಪನಾಶಿನಿ; ಅವಳೇ ನಮ್ಮ ಭಾಗ್ಯದೇವತೆ. ಅಂಥವಳನ್ನು ಜರೆಯಲು ನಿಮಗೆ ನಾಲಗೆಯು ಹೇಗೆ ಬರುವುದಮ್ಮ!

ಜ್ವಾಲೆ—ಲೋ, ಸಾಕು! ಬಾಯಿ ಮುಚ್ಚು; ಮೂಢನಾದ ನಿನಗೇನು ತಿಳಿಯುವುದು? ನಿನ್ನ ಸಂಗಡ ಮಾತಾಡಿ ಪ್ರಯೋಜನವೇನೂ ಇಲ್ಲವು. ಅವಳೇ ಪ್ರತ್ಯಕ್ಷಳಾದರೆ ಅವಳ ದೋಷವನ್ನು ಅವಳಿಗೆ ತಿಳಿಸುವೆನು. ಅವಳೇ ನನ್ನೆದುರಿನಲ್ಲಿ ನಿಲ್ಲಲಿ. ನನ್ನಿಚ್ಛೆಯಂತೆ ನನ್ನನ್ನು ಆ ಕಡೆ ಕರಕೊಂಡು ಹೋಗುವುದಾದರೆ ದೋಣಿಯನ್ನು ಇತ್ತ ತಾ. ಇಲ್ಲವಾದರೆ ಇಲ್ಲಿಂದ ಹೊರಟುಹೋಗು. (ಅಂಬಿಗನು ಹೋಗುವನು.)

ಗಂಗೆ—(ಪ್ರತ್ಯಕ್ಷಳಾಗಿ) ಯಾರೇ ನೀನು? ಪವಿತ್ರವಾದ ನನ್ನ ದಡದಲ್ಲಿ ನಿಂತು ನನ್ನನ್ನು ಹೀಯಾಳಿಸುತ್ತಿರುವವಳು?

ಜ್ವಾಲೆ—ನಾನ್ಯಾರೆಂಬುದನ್ನು ಹಿಂದಿನಿಂದ ಹೇಳುವೆನು. ನಿನ್ನಲ್ಲಿ ದೋಷವಿದೆಯೆಂದು ಹೇಳಿದುದು ನನ್ನ ತಪ್ಪೇ?

ಗಂಗೆ—ತಪ್ಪೋ? ಒಪ್ಪೋ? ಏನು ನಿಜ? ಏನು ತಪ್ಪು?

ಜ್ವಾಲೆ—ನಿನ್ನ ಜಲವನ್ನು ನಾನೆಂದಿಗೂ ಮುಟ್ಟಲಾರೆ; ಅದು ನಿಜವು. ಅದಕ್ಕೆ ಅಂಬಿಗರ ಸಹಾಯ ಕೋರಿದೆ.

ಗಂಗೆ—ಅದೇಕೆ ನನ್ನ ನೀರನ್ನು ನೀನು ಮುಟ್ಟಲಾರೆ?

ಜ್ವಾಲೆ—ನಿನ್ನಲ್ಲಿ ದೋಷವಿರುವುದು. ನಿನಗೆ ಗೊತ್ತಿಲ್ಲವೇ?

ಗಂಗೆ—ಏನು ದೋಷ? ಇದೇಕೆ ಹೀಗೆ ವಿಪರೀತವಾಗಿ ಮಾತಾಡುತ್ತಿರುವಿ?

ಜ್ವಾಲೆ—ವಿಪರೀತವೇನೂ ಹೇಳಲಾರೆ. ನೀನು ದೋಷವತಿಯು. ಅಪುತ್ರವತಿಯಾದ ದೋಷವು ನಿನ್ನಲ್ಲಿದೆ. ನಿನ್ನ ಮಗನನ್ನು ಪಾರ್ಥನು ಮೋಸದಿಂದ ಕೊಂದನು. ಆ ಕಾರಣ ನೀನು ಅಪುತ್ರವತಿಯಲ್ಲವೇ? ಪುತ್ರಹೀನೆಯ ಮುಖವನ್ನು ನೋಡಿದರೆ ಲಕ್ಷ್ಮಿಯು ತೊಲಗುವಳು.

ನಿನ್ನ ಮೈಯನ್ನು ಮುಟ್ಟಿದರೆ ಪುಣ್ಯನಾಶವೇ ಸರಿ. ಅಪುತ್ರವತಿಯನ್ನು ಮುಟ್ಟಬಾರದೆಂದು ಲೋಕವೆಲ್ಲವೂ ಆಡಿಕೊಳ್ಳುತ್ತಿದೆ.

ಗಂಗೆ—ಏನಂದೆ! ನನ್ನ ಭೀಷ್ಮನು ಮಡಿದನೇ?

ಜ್ವಾಲೆ—ಯಾಕೆ? ಲೋಕವೆಲ್ಲವೂ ಆಡಿಕೊಳ್ಳುತ್ತಿರುವುದು. ಕುರುಕ್ಷೇತ್ರ ಯುದ್ಧದಲ್ಲಿ ಅರ್ಜುನನು ಶ್ರೀಕೃಷ್ಣನಾಜ್ಞೆಯಂತೆ ಮೋಸದಿಂದ ಬಾಣಗಳನ್ನೆಸೆದು ಭೀಷ್ಮಾಚಾರ್ಯರ ಶರೀರವನ್ನೆಲ್ಲಾ ಅಲಗುಮಯವಾಗಿ ಮಾಡಿಬಿಟ್ಟನಂತೆ. ಆ ಮೇಲೆ ಭೀಷ್ಮಾಚಾರ್ಯರು ಶರತಲ್ಪದ ಮೇಲೆ ಮಲಗಿದ್ದು ಕೆಲವು ದಿನಗಳಲ್ಲೇ ದೇಹವನ್ನು ತ್ಯಜಿಸಿದರಂತೆ. (ಗಂಗೆಯು ಕೆಳಗೆ ಬಿದ್ದು ಕುಳಿತುಕೊಂಡು ತಲೆಯನ್ನು ಎರಡು ಕೈಗಳಿಂದ ಅದುಮಿ ಕಣ್ಣೀರು ಸುರಿಸುತ್ತಾ).

ಗಂಗೆ—(ಕಣ್ಣೀರು ತಂದು) ಅಯ್ಯೋ! ನನ್ನ ಮಗನ ಮರಣವನ್ನು ತಿಳಿಯದಾದೆನಲ್ಲ! ಹಾ! ಭೀಷ್ಮಾ! ಮಗು! ನೀನು ನನ್ನನ್ನು ಬಿಟ್ಟಗಲಿದೆಯಾ? ಕಂದಾ! ಕೃಷ್ಣನ ಕುಟಿಲೋಪಾಯಗಳಿಗೆ ನೀನುತುತ್ತಾದೆಯಾ? ಇನ್ನೆಂದಿಗೆ ನಿನ್ನನ್ನು ಕಾಣಲಿ! ತಂದೆಯ ಸುಖಕ್ಕೆ ತನ್ನ ಸಕಲೈಶ್ವರ್ಯವನ್ನೂ. ಪದವಿಯನ್ನೂ, ಭೋಗವಿಲಾಸಗಳನ್ನೂ ಧಾರೆಯೆರೆದು, ಬ್ರಹ್ಮಚಾರಿಯಾಗಿ ಬಾಳಿದೆ. ಶಸ್ತ್ರಜ್ಞರಲ್ಲಿ ನೀನು ಮಹಾಪಂಡಿತನಾಗಿದ್ದೆ. ಆ ವೀರತ್ವವು ಪಾರ್ಥನ ಮೋಸಕೃತ್ಯಗಳಿಗೆ ಬಲಿಯಾಯಿತೇ? ವೀರಾಧಿವೀರರಿಗೆಲ್ಲಾ ನೀನು ತಿಲಕಪ್ರಾಯನಾಗಿದ್ದೆ. ನನಗೆ ಏಕಮಾತ್ರನಾದ ಪುತ್ರನು ಭೀಷ್ಮನು. ಅವನನ್ನೂ ಕಳೆದುಕೊಂಡು ನಾನು ಹೇಗೆ ಜೀವಿಸಲಿ! ಅಯ್ಯೋ ವಿಧಿಯೇ! ನನ್ನ ಮೇಲೆ ಕರುಣೆಯನ್ನು ತೋರಲಾರದೆ ಹೋದೆಯಾ?

ಜ್ವಾಲೆ—ಅಮ್ಮಾ! ಈಗ ಹಂಬಲಿಸಿ ಫಲವೇನು? ಆಗಬೇಕಾದ್ದೆಲ್ಲವೂ ಆಯಿತು. ನೀನು ಮಾತ್ರ ಸುಮ್ಮನಿರುವೆ.

ಗಂಗಾ—ಅಮ್ಮಾ! ಈಗೇನು ಮಾಡಬೇಕೋ ನನಗೆ ತೋರುವುದಿಲ್ಲ. ಪುತ್ರಶೋಕವು ನನ್ನ ದೇಹವನ್ನೆಲ್ಲಾ ವ್ಯಾಪಿಸಿ ಜ್ಞಾನಶೂನ್ಯಳನ್ನಾಗಿ ಮಾಡಿದೆ. ನೀನೇ ಹೇಳು—ಇನ್ನೇನು ಮಾಡಲಿ? ನಿನ್ನ ಪರಿಚಯವನ್ನು ನನಗೆ ನೀನು ತಿಳಿಸಲಿಲ್ಲವು. ಇದೇಕೆ? ಹೀಗೆ ಬಂದು ನನ್ನ ಕರ್ಮಫಲಗಳನ್ನು ಬಯಲಿಗೆಳೆಯುತ್ತಿರುವೆ.

ಜ್ವಾಲೆ—ದೇವಿ! ದೇವಾಂಶಸಂಭೂತೆಯಾದ ನಿನಗೆ ಮಾನವಿಯಾದ ನಾನು ಹೇಳುವುದಕ್ಕೇನಿದೆ? ನಾನೂ ನಿನ್ನಂತೆ ಪಾರ್ಥನ ಅಹಂಕಾರಕ್ಕೆ ಬಲಿಯಾಗಿರುವೆನು. ನಮ್ಮ ರಾಜ್ಯ-ಕೋಶವೆಲ್ಲವೂ ಆತನ ವಶವಾಯಿತು. ಯಾರ ಗೊಡವೆಗೂ ಹೋಗದೆ ತನ್ನ ಧರ್ಮವನ್ನು ಪಾಲಿಸುತ್ತ, ದೇವರ ಸ್ಮರಣೆಯಲ್ಲಿ ಕಾಲಕಳೆಯುತ್ತಿದ್ದ ನನ್ನ ಪತಿಯು ಅವನ ಅಡಿಯಾಳಾಗಬೇಕಾಯಿತು. ನಮ್ಮ ಪುತ್ರರು—ಕೇವಲ ಹಸುಳೆಯರು-ವೀರಸ್ವರ್ಗವನ್ನು ಪಡೆದರು. ಅವರ ಮಾತೆಯಾದ ಈ ಜ್ವಾಲೆಯು ನಿರ್ಗತಿಕಳಾಗಿ ಅಲೆದಾಡುತ್ತಿರುವಳು. ಏನು ಹೇಳಲಿ? ಇದೆಲ್ಲವೂ ನಮ್ಮ ಕರ್ಮಫಲ. ಅವರೂ ಆ ನರಹಿಂಸಕನ ಶಿರಸ್ಸನ್ನು ತರಿಯುವವರು ಯಾರೂ ಈ ಭೂಲೋಕದಲ್ಲಿಲ್ಲದಾದರೇ? ನಿರ್ಬಲವಾದ ಗಿಡುಗನಾದರೂ ತನ್ನ ಮಕ್ಕಳಿಗೆ ಕೇಡು ಬಯಸುವ ನೀಚರನ್ನು ಕೊಕ್ಕಿನಿಂದ ಇರಿದು ಓಡಿಸುವುದು. ಅತ್ಯಲ್ಪ ಜೀವಿಯಾದ ಉರಗವಾದರೋ ತನ್ನ ಹಗೆಯನ್ನು ಹಿಂಬಾಲಿಸಿ ಸಂದರ್ಭವೊದಗಿದಾಗ ವಿಷದ ಹಲ್ಲುಗಳನ್ನೂರಿ ಶತ್ರುವಿಗೆ ತಕ್ಕ ಪ್ರತೀಕಾರವನ್ನು ಮಾಡುವುದು. ಹುಲಿ-ಸಿಂಹಗಳು ತಮ್ಮ ಮರಿಗಳಿಗತ್ಯಲ್ಪ ನೋವೆಸಗಿದವರ ಎದೆಗುಂಡಿಗೆಗಳನ್ನೇ ಹರಿದು ಹಾಕುವುವು. ಆದರೆ ಮನುಷ್ಯದೇಹವನ್ನು ಧರಿಸಿದ ನಾನು ಸಹಾಯವಿಹೀನಳಾಗಿ, ನಿರ್ಗತಿಕಳಾಗಿ, ಭಿಕ್ಷುಕಿಯಾಗಿ ಅಲೆದಾಡುತ್ತಿರುವೆನು. ದುರ್ಬಲೆಯಾದ ನನ್ನಿಂದ ಏನು ಮಾಡಲು ಸಾಧ್ಯವಿದೆ? ದೇವಾಂಶಸಂಭೂತೆಯಾದ ನೀನು ಎಷ್ಟೋ ಕಾರ್ಯಗಳನ್ನು ನಿಮಿಷಾರ್ಧದಲ್ಲಿಯೇ ಮಾಡಬಲ್ಲೆ!

ಗಂಗೆ—ಜ್ವಾಲೆ! ನಿನ್ನ ಮಾತುಗಳನ್ನು ಕೇಳಿ ನನ್ನ ವೈರಿಯು ಉರಿಯಲಾರಂಭಿಸಿದೆ. ಅನ್ಯಾಯವಾಗಿ ಸ್ತ್ರೀಯರನ್ನು ನೋಯಿಸುವ ನರನು ಭೂಮಿಯಲ್ಲಿ ಜೀವಿಸಿರಬಾರದು. ನನ್ನ ಮಗ ಭೀಷ್ಮನನ್ನು ಅನ್ಯಾಯವಾಗಿ ಕೊಂದ ಅರ್ಜುನನು ಇಂದಿಗೆ ಆರು ದಿವಸಗಳೊಳಗಾಗಿ ಅವನ ಮಗನಿಂದಲೇ ಭೂಶಯ್ಯಾಗತನಾಗಲಿ. ಈ ನನ್ನ ಶಾಪಕ್ಕೆ ಅಷ್ಟದಿಕ್ಪತಿಗಳೂ ಸೂರ್ಯ-ಚಂದ್ರರೂ ಸಾಕ್ಷಿಯಾಗಿರಲಿ. ಜ್ವಾಲೆ! ನೀನಿನ್ನು ಸ್ವಭವನಕ್ಕೆ ತೆರಳು. ಅರ್ಜುನನು ಇಂದಿಗೆ ಆರು ದಿನಗಳಲ್ಲಿ ಜೀವದಲ್ಲಿರಲಾರನು.

ಜ್ವಾಲೆ—ತಾಯೀ! ನಿನಗೆ ಅಭಿವಂದನೆ. ಹೆತ್ತ ಮಾತೆಯ ಕರುಳು ನೋವನ್ನು ತಿಳಿದು ಘೋರಪಾತಕಿಗೆ ಕೊಟ್ಟ ಶಾಪವನ್ನು ಕೇಳಿ ಇಂದು ನನಗೆ ಬಹಳ ಆನಂದವಾಯಿತು. (ಸ್ವಗತ) ಈ ದಿನ ನನ್ನ ಕಾರ್ಯವು ನೆರವೇರಿತು. ಪಾರ್ಥನ ಶಿರಸ್ಸು ಇಂದಿಗೆ ಆರು ದಿನಗಳಲ್ಲಿ ಧೂಳನ್ನು ಮುತ್ತಿಕ್ಕುವುದು. ಆಗ ಅವನ ಮಿತ್ರ ಕೃಷ್ಣನೇನು ಮಾಡುವನೋ ನೋಡಬೇಕಾಗಿದೆ. ಏನು ನೋಡುವುದು? ಅವನ ರುಂಡವು ನಾಯಿನರಿಗಳಿಗೆ ಆಹಾರವಾಗುವುದಷ್ಟೆ? ಸಂತೋಷ! ಸಂತೋಷ! ನನ್ನ ಹಠಸಾಧನೆಯು ನೆರವೇರಿತು. ಗಂಗಾಶಾಪವು ಖಂಡಿತವಾಗಿಯೂ ಫಲಿಸುವುದು. ಇನ್ನು ನಾನು ಸತ್ತರೂ ಚಿಂತೆಯಿಲ್ಲ. ಬದುಕಿಯೂ ದರೂ ಮಾಡತಕ್ಕದ್ದೇನಿದೆ? ಕೈಹಿಡಿದ ಪತಿಯೇ ನನ್ನನ್ನು ತ್ಯಜಿಸಿದನು. ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳು ರಣರಂಗದಲ್ಲಿ ಮಡಿದರು. ನಾನೀಗಲೇ ಅಗ್ನಿಪ್ರವೇಶಮಾಡಿ ನನ್ನ ಪುತ್ರರನ್ನು ಕಲೆತು ಅರ್ಜುನನ ರುಂಡವನ್ನು ತರಿದು ಅಶರೀರಿಯಾಗಿ ದುಷ್ಟನ ರಕ್ತವನ್ನು ಪಾನಮಾಡುವೆನು. ಛಿ! ಬೇಡ, ಬೇಡ! ಸಶರೀರಿಯಾಗಿಯೇ ಗಂಗಾಶಾಪದ ಫಲಿತಾಂಶವನ್ನು ನೋಡುವೆನು. (ಪ್ರಕಾಶ) ಎಲೇ ಗಂಗಾದೇವಿಯೇ! ನನಗಿನ್ನು ಭೂಮಿಯಲ್ಲಿ ನನ್ನದೆಂದೆಣಿಸಿಕೊಳ್ಳುವ ವಸ್ತುವೇನೂ ಇಲ್ಲವು. ಆಶ್ರಯವು ನನಗೆಲ್ಲಿಯೂ ದೊರಕದು.

ಗಂಗೆ—ಜ್ವಾಲೇ! ನಿನ್ನ ಮಾತುಗಳನ್ನು ಕೇಳಿದರೆ ಕಲ್ಲಾದರೂ ಕರಗದಿರದು. ಬಾ! ನನ್ನ ಮನೆಯಲ್ಲಿ ಸೌಖ್ಯವಾಗಿರು. ನಾವಿಬ್ಬರೂ ಒಂದೇ ವಿಧದಿಂದ ದುಃಖವನ್ನನುಭವಿಸುತ್ತಿರುವೆವು. ಆದ್ದರಿಂದ ನಾವಿಬ್ಬರೂ ನಮ್ಮ ವಿರೋಧಿಯ ಏಳು-ಬೀಳನ್ನು ನನ್ನಾ ನೀರಿನಾಗರದಿಂದ ನೋಡುತ್ತಿರೋಣ. ನಿರಾಶ್ರಿತಳಾದ ನಿನಗೆ ನಾನೇ ಆಶ್ರಯದಾತಳಾಗುವೆನು. ಬಾ! ಇನ್ನು ತಡಮಾಡದೆ ಈ ಸಲಿಲಾಗರದೊಳಕ್ಕೆ ಧುಮುಕೋಣ.

ಜ್ವಾಲೆ—ದೇವಿಯೇ! ನಿನ್ನ ಕರುಣಾರ್ದ್ರ ಹೃದಯಕ್ಕೆ ನಾನೆಷ್ಟು ವಂದಿಸಿದರೂ ಸಾಲದು. ಇನ್ನು ನಿನ್ನಿಷ್ಟದಂತಾಗಲಿ. (ಇಬ್ಬರೂ ಧುಮುಕುವರು.)

---

## ದೃಶ್ಯ ೩

[ಮಾಹಿಷ್ಮತೀಪುರದ ಹೊರಗಣ ಬಯಲಲ್ಲಿ ಪಾರ್ಥನ ಶಿಬಿರ. ಪಾರ್ಥ, ವೃಷಕೇತು, ಮೇಘವರ್ಣಾದಿಗಳು.]

ಪಾರ್ಥ—ಇದೇಕೆ! ಇನ್ನೂ ನೀಲಧ್ವಜನು ಬರಲಿಲ್ಲ? ಈ ಹೊತ್ತೂ ಯುದ್ಧ ಮಾಡಬೇಕೆಂದಿರುವನೇ?

ವೃಷಕೇತು—ಆತನು ನಿನ್ನೆಯ ಯುದ್ಧದಲ್ಲಿ ತಕ್ಕ ಮರ್ಯಾದೆಯನ್ನು ಸಂಪಾದಿಸಿದನು. ಇನ್ನು ಅವನ ಪ್ರಾಣ ಮಾತ್ರ ಒಂದು ಉಳಿದಿದೆ. ಅದನ್ನೂ ಕಳೆದುಕೊಳ್ಳಬೇಕೆಂದಿರುವನೇನೋ!

ಮೇಘವರ್ಣ—ಅದೋ! ಅಲ್ಲಿ ಯಾರೋ ಸಕಲ ಪರಿವಾರ ಸಮೇತ ಬರುವಂತಿದೆ. ಅವನೇ, ಅವನೇ ನೀಲಧ್ವಜ. ತಕ್ಕಬುದ್ಧಿ ಬಂದಂತಿದೆ.

ಚಾರಕ—(ಪ್ರವೇಶಿಸಿ) ವೀರಾಗ್ರೇಸರಾ! ನೀಲಧ್ವಜ ಮಹಾರಾಜರು ಒಳಗೆ ಬರಲು ತಮ್ಮ ಅಪ್ಪಣೆಯನ್ನು ನಿರೀಕ್ಷಿಸುತ್ತಿರುವರು.

ಪಾರ್ಥ—ಒಳ್ಳೆಯದು, ಒಳಗೆ ಬರಹೇಳು.

[ನೀಲಧ್ವಜನು ಪ್ರವೇಶಿಸಿ ಧನ, ಕನಕ, ವಸ್ತ್ರಾದಿಗಳನ್ನರ್ಪಿಸುವನು.]

ನೀಲಧ್ವಜ—ಧನಂಜಯ! ನಿನಗೆ ಜಯವಾಗಲಿ. ಇದೋ! ನಿನ್ನ ಯಾಗಾರ್ಥವಾಗಿ ನನ್ನ ಕೋಶದಲ್ಲಿರುವ ಅಮೂಲ್ಯವಾದ ಮುತ್ತುರತ್ನಗಳನ್ನು ತಂದೊಪ್ಪಿಸಿರುವೆನು. ಅಲ್ಲದೆ, ಚತುರಂಗಬಲ ಸಮೇತ ಬಂದು ನಿನಗೆ ನನ್ನಿಂದಾಗುವ ಅಲ್ಪ ಸಹಾಯವನ್ನು ಮಾಡಲೆತ್ನಿಸಿರುವೆನು. ನನ್ನ ಇಚ್ಛಾಪರಿಪೂರ್ಣತೆಯನ್ನು ಹೊಂದುವುದಕ್ಕೆ ಸಂದರ್ಭ ಕೊಡಲಾರೆಯಾ?

ಪಾರ್ಥ– (ಎದ್ದು ನೀಲಧ್ವಜನನ್ನು ತಬ್ಬಿಕೊಂಡು) ನಿನ್ನ ಸೌಹಾರ್ದತೆಗೆ ಮೆಚ್ಚಿದೆನು. ಇದೋ, ಈ ಪೀಠವನ್ನಲಂಕರಿಸು.

ನೀಲಧ್ವಜ—ವೀರಾಗ್ರೇಸರಾ! ಇಷ್ಟು ಮನ್ನಣೆಯನ್ನು ಸೋತ ರಾಜರಿಗೆ ನೀನೆಂದೂ ತೋರುವುದಿಲ್ಲವೆಂದು ಆಲೋಚಿಸಿ ಬಹಳ ಸಂಕುಚಿತನಾಗಿ ಬಂದೆನು. ಆದರೆ, ನಿನ್ನ ಮಹದೌದಾರ್ಯವನ್ನು ನೋಡಿ ಪರಮ ಸಂತುಷ್ಟನಾದೆನು. ನಾನಾದರೋ ಅನಾವಶ್ಯಕವಾಗಿ ಯುದ್ಧ

ಮಾಡಿ ನಿನ್ನನ್ನು ಬೇಸರಗೊಳಿಸಿದೆ. ನನ್ನ ಅಪರಾಧವನ್ನು ಕ್ಷಮಿಸಲಾರೆಯಾ?

ಪಾರ್ಥ—ಕ್ಷಮಿಸುವುದಕ್ಕೇನಿದೆ? ಕ್ಷತ್ರಿಯವಂಶಜರು ಯುದ್ಧ ಮಾಡುವುದು ವಿಹಿತವಾದ ಧರ್ಮವು. ಅದರಲ್ಲಿ ಅಪರಾಧವೇನೂ ಇಲ್ಲ. ಗೆದ್ದರೂ ಬಿದ್ದರೂ ತನ್ನ ಶತ್ರುವನ್ನು ಮಿತ್ರನೆಂದು ಭಾವಿಸುವುದು ಕ್ಷತ್ರಿಯನ ನಡತೆಯಲ್ಲವೇ? ನೀನು ನಮ್ಮ ಸಂಗಡ ದಿಗ್ವಿಜಯಕ್ಕಾಗಿ ಹೊರಟಿರುವಿಯೆಂದು ಕೇಳಿ ಬಹಳ ಸಂತೋಷಪಡುತ್ತಿರುವೆನು. ನಮಗೆ ಗಡಿಯ ಹಾದಿಗಳು ಅರಿಯವು. ನೀನು ನಮಗೆ ಮಾರ್ಗದರ್ಶಕನಾಗುವುದಾದರೆ ತುಂಬಾ ಉಪಕಾರವಾಗುವುದೆಂದು ನಂಬುತ್ತೇನೆ. ವೃಷಕೇತು, ಈ ನೀಲಧ್ವಜ ಮಹಾರಾಜರು ನಮ್ಮ ಗೆಳೆಯರೆಂದು ಭಾವಿಸಿ ಉಚಿತ ಸನ್ಮಾನಗಳಿಂದ ಸತ್ಕರಿಸುತ್ತಿರು.

ವೃಷಕೇತು—ಪಿತನೇ! ಅಪ್ಪಣೆ! ಇನ್ನು ಯಾವ ದಿಕ್ಕಿಗೆ ಕುದುರೆಯನ್ನು ಬಿಡಲಿ?

ಅರ್ಜುನ—ದಕ್ಷಿಣ ದಿಕ್ಕಿಗೆ.

ವೃಷಕೇತು—ಹಾಗೆಯೇ ಆಗಲಿ.

---

## ದೃಶ್ಯ ೪

[ಮಣಿಪುರದ ಉದ್ಯಾನ—ಚಿತ್ರಾಂಗದೆ ಉಲೂಪಿಯರು ವಿಹರಿಸುತ್ತಿರುವರು]

ಉಲೂಪಿ—ಅಕ್ಕಾ! ಇತ್ತ ನೋಡು! ಈ ಮನೋರಂಜನಿಯು ಅರಳಿ ತನ್ನ ಸುಗಂಧವನ್ನು ಈ ಪ್ರದೇಶದಲ್ಲೆಲ್ಲ ಬೀರುತ್ತಿರುವುದು.

ಚಿತ್ರಾಂಗದೆ—ಅಹುದು. (ಅಳಲುಪಕ್ರಮಿಸುವಳು)

ಉಲೂಪಿ—ಅಕ್ಕಾ! ಇದೇಕೆ ನಿನ್ನ ಕಣ್ಣಿನಲ್ಲಿ ಅಶ್ರುಬಿಂದುವು ಖೋಡಿಯಾಗಿ ಹರಿಯುತ್ತಿರುವುದು?

ಚಿತ್ರಾಂಗದೆ—ಈ ಮನೋರಂಜನಿಯನ್ನು ನೋಡುವಾಗ ನನ್ನ ಕಣ್ಣುಗಳಲ್ಲಿ ನೀರು ತುಂಬುವುದು. ಇಲ್ಲೇ ವಿಹರಿಸುತ್ತಿರುವಾಗ ನನ್ನ ಮನೋಹರನು ನನ್ನ ಕಣ್ಣಿಗೆ ಬಿದ್ದನು. ಇಲ್ಲೇ ನನ್ನ ಹೃದಯಚೋರ

ನಾದ ಅರ್ಜುನನು ತನ್ನ ಪ್ರೇಮವಾಣಿಯಿಂದ ನನ್ನನ್ನು ಮರುಳುಗೊಳಿಸಿದನು. ಇಲ್ಲಿಯೇ...ಇಲ್ಲಿಯೇ...ತಾನು ಒಂದು ವರುಷದೊಳಗಾಗಿ ಬಂದು ನನ್ನನ್ನು ಹಸ್ತಿನಾವತಿಗೆ ಕರೆದೊಯ್ಯುವೆನೆಂದು ನನ್ನ ಕರದಲ್ಲಿ ತನ್ನ ಕರವನ್ನಿಟ್ಟು ತನ್ನ ಕುಲದೇವತೆಯ ಸಾಕ್ಷಿಯನ್ನು ನುಡಿದು ಭಾಷೆಯನ್ನಿತ್ತನು. ಉಲೂಪಿ! ಇಲ್ಲೇ ಎಲ್ಲಾ ಜರಗಿತು. ಇಲ್ಲೇ ಪ್ರೇಮಸುಧೆಯನ್ನು ನನ್ನಧರದ ಮೇಲೆ ಸುರಿಸಿದನು. ಆ ವಾಗ್ದಾನದ ಅವಧಿ ಕಳೆದು ಇಂದಿಗೆ ಹದಿನೆಂಟು ವರ್ಷಗಳಾಗಿ ಹೋದುವು. ಆದರೂ ಅವನ ಸುಳಿವೇ ಇಲ್ಲ!

ಉಲೂಪಿ—ಅಕ್ಕಾ! ಅವನ ಸುಳಿವು ಹೇಗೆ ತಾನೇ ಆದೀತು! ಅಂಕದಲ್ಲಿ ದ್ರೌಪದಿಯೂ ಸುಭದ್ರೆಯೂ ಇರುತ್ತಿರುವಾಗ ಅವನಿಗೆ ಇತರರ ವಿಚಾರ ಜ್ಞಾಪಕಕ್ಕೆ ಬಂದೀತೇ?

ಚಿತ್ರಾಂಗದೆ—ಉಲೂಪಿ! ಪುರುಷರೆಲ್ಲರೂ ಮೋಸಗಾರರೇ! ಮೋಹಪಾಶದಲ್ಲಿ ಬಿದ್ದು, ನಮ್ಮ ಬಳಿಯಲ್ಲಿರುವಾಗ ಮಾತ್ರ ನಮ್ಮ ಸೌಂದರ್ಯಾತಿಶಯ, ನಮ್ಮ ಪ್ರೇಮ, ನಮ್ಮ ಸೌಶೀಲ್ಯಾದಿ ಗುಣಗಳನ್ನು ಎಡೆಬಿಡದೆ ಹೊಗಳುವರು. ಒಮ್ಮೆ ನಮ್ಮ ಮುಖ ಮರೆಯಾದರೆ, ಅವರ ಪ್ರೇಮವೂ, ಅವರ ಹೊಗಳಿಕೆಯೂ ಇನ್ನೊಬ್ಬಾಕೆಯ ಮೇಲೆ ಸುರಿಯುವುದು. ನಾವಾದರೋ ಅನುನಿತ್ಯವೂ ಅವರನ್ನೇ ನಂಬಿ ಅವರನ್ನೇ ನಮ್ಮ ಹೃದಯದಲ್ಲಿಟ್ಟು ಒಣಗುತ್ತಿರುವೆವು. ಆದರೆ ಅವರದನ್ನು ಮಾತ್ರ ಅರಿಯರು.

ಉಲೂಪಿ—ಅಹುದು; ಅಹುದು. ಅವರ ವಶವಾಗುವ ತನಕ ಏನು ಬೇಕಾದರೂ ಮಾಡಬಲ್ಲರು. ನಮ್ಮ ಸಮ್ಮುಖದಲ್ಲಿ ತಮ್ಮ ವಶವಾಗುವ ವರೆಗೆ ಪ್ರೇಮದ ಮಳೆಯನ್ನು ಸುರಿಸುವಂಥಾ ಜಾಣತನದ ಮಾತುಗಳನ್ನಾಡುವರು. ಒಮ್ಮೆ ನಮ್ಮ ಕಣ್ಮರೆಯಾದರೆಂದರೆ ಆ ಪ್ರೇಮದ ಮಳೆಯು ಮಂಜಿನಂತೆ ಆರಿಹೋಗುವುದು. ನಮ್ಮ ಹೃದಯದ ಪರಿತಾಪವನ್ನು ಅವರೇನು ಬಲ್ಲರು? ಚಿತ್ರಾ! ಇದೆಲ್ಲಕ್ಕೂ ನಾವೇ ಕಾರಣರು.

ಚಿತ್ರಾಂಗದೆ—ನಿಜ! ಉಲೂಪಿ! ನಿಜ!! ಅರ್ಜುನನಿಗೆ ಲಗ್ನವಾಗಿ

ದೆಯೆಂದು ತಿಳಿಯದೆ ಅವನ ರಾಣಿಯಾಗಲು ಭ್ರಮಿಸಿ, ಅವನ ರೂಪಕ್ಕೆ ಮೆಚ್ಚಿ, ಅವನ ಮಾತಿಗೆ ಮರುಳಾಗಿ, ಅವನನ್ನು ವರಿಸಿದೆನು. ನಿನ್ನನ್ನೂ ಕೈಹಿಡಿದಿದ್ದನೆಂದು ನಾನು ತಿಳಿಯದಾದೆನು. ಉಲೂಪಿ! ಅವನಂತಹ ಕೃತಘ್ನನೇ! ಈ ಊರಿನಿಂದ ಹೋದನಂತರ ನನ್ನನ್ನು ಮರೆತೇಬಿಟ್ಟನು.

ಉಲೂಪಿ—ಅಹುದು! ಆದರೆ, ಅವನು ಇಲ್ಲಿಂದ ಹೋದಕೂಡಲೇ ಅರಣ್ಯವಾಸಿಯಾದನು. ಆ ಮೇಲೆ ಯುದ್ಧವೂ ಸಂಭವಿಸಿತು. ಅವನಿಗಿಲ್ಲಿ ಬರಲು ಸಮಯವು ತಾನೇ ಎಲ್ಲಿರುವುದು?

ಚಿತ್ರಾಂಗದೆ—ಯುದ್ಧವು ಮುಗಿದ ನಂತರವಾದರೂ ಬರಬಹುದಾಗಿತ್ತಲ್ಲವೇ?

ಉಲೂಪಿ—ಇನ್ನಾದರೂ ಬರಬಹುದು. ಮರಳಿ ನಮ್ಮ ಕೈಗೆ ಸಿಕ್ಕಿದನೆಂದರೆ ಅವನು ಪುನಃ ಹಸ್ತಿನಾವತಿಗೆ ಹೋಗನು.

ಚಿತ್ರಾಂಗದೆ—ಬರಬಹುದೇ? ಛಿ! ಅವನೆಂದಿಗೂ ಬರಲಾರನು. ನಮ್ಮ ಬಯಕೆಯು ಕನಸಿನಲ್ಲಿ ಮಂದಾರಪುಷ್ಪವನ್ನು ಬಯಸಿದಂತೆ ಈಡೇರುವುದು ಅಸಾಧ್ಯವು! ಯುದ್ಧವು ಮುಗಿದ ನಂತರ ಸಕಲ ರಾಜ್ಯವೂ ಪಾಂಡವರದಾಗಿರುವುದು. ರಾಜ್ಯಸಂಪತ್ತನ್ನು ಅನುಭವಿಸುವುದರ ಬದಲು ಇಲ್ಲಿಗೆ ಬರಲು ಅವನಿಗೆ ಮನಸ್ಸಾಗುವುದೇ?

ಉಲೂಪಿ—ಬರಲಾರನು; ಆದರೆ; ಅವನು ನಿಜವಾಗಿಯೂ ಒಮ್ಮೆ ಬರುವನೆಂದು ನನ್ನ ಮನಸ್ಸು ಹೇಳುತ್ತಿರುವುದು. ನನ್ನ ಮನಸ್ಸಿನ ಭಾವನೆಯಂತೆ ಸಕಲ ಕಾರ್ಯಗಳೂ ನನ್ನ ವಿಷಯದಲ್ಲಿ ಜರಗುತ್ತಿರುವುವು. ಆದುದರಿಂದಲೇ ನಾನವನ ಆಲೋಚನೆಯನ್ನು ಹಚ್ಚಿಕೊಳ್ಳದೆ ದೃಢಮನಸ್ಕಳಾಗಿರುವೆನು.

ಚಿತ್ರಾಂಗದೆ—ಆ ನಿನ್ನ ಮನೋಭಾವವು ಫಲಿಸುವುದು ಪರಮಾತ್ಮನ ಕೈಯಲ್ಲಿದೆ.

[ಬಭ್ರುವಾಹನನು ಪ್ರವೇಶಿಸುವನು.]

ಬಭ್ರು—ಅಮ್ಮಾ, ಕತ್ತಲು ಮುಸುಕುತ್ತಿರುವುದು. ಪಕ್ಷಿಗಳೂ, ಮೃಗಗಳೂ ತಂತಮ್ಮ ನಿವಾಸಸ್ಥಾನಕ್ಕೆ ತೆರಳುತ್ತಿರುವವು. ಆದೇಕೆ ನೀವಿನ್ನೂ ಇಲ್ಲಿಯೇ ಇದ್ದೀರಿ?

ಚಿತ್ರಾ— ಈಗಲೇ ಹೊರಡುವುದರಲ್ಲಿದ್ದೆವು. ನೀನೇಕೆ ಬಂದೆ? ನಾವೇ ಬರುತ್ತಿದ್ದೆವಲ್ಲ!

ಬಭ್ರು—ಸರಿಯೇ. ಹಾಗಾದರೆ ಹೋಗೋಣವೇ? ಇದೇ ನಾಶ್ಚರ್ಯ! ಈ ಬಾಣವೀಗ ನನ್ನ ಬತ್ತಳಿಕೆಯನ್ನು ಸೇರುತ್ತಿತ್ತು. (ಕೈಯಲ್ಲಿ ಬಾಣವನ್ನು ಹಿಡಿಯುವನು.)

ಚಿತ್ರಾ—ಇದೆಲ್ಲಿಂದ? ಇದಾವ ಬಾಣ! (ವಿಸ್ಮಿತಳಾಗಿ ಬಾಣವೊಂದನ್ನು ನೋಡುತ್ತಿರುವಳು.)

ಬಭ್ರು—ಅವುದೋ ಕಾಣೆ. ಅಮ್ಮಾ ನೋಡಿರಿ. ಇದು ವಜ್ರಾಯುಧದಂತೆ ಶೋಭಿಸುತ್ತಿದೆ. ಆದರಿದನ್ನು ನನ್ನ ಬತ್ತಳಿಕೆಯಲ್ಲಿಟ್ಟುಕೊಳ್ಳುವುದು ಯುಕ್ತವಲ್ಲ.

ಅಶರೀರವಾಣಿ—ಯುಕ್ತವು. ಆ ಬಾಣವನ್ನು ಗಂಗೆಯು ನಿನ್ನ ರಕ್ಷಣೆಗಾಗಿ ಕಳುಹಿಸಿರುವಳು. ನಿನಗದರಿಂದ ಕಲ್ಯಾಣವಾಗುವುದು.

ಬಭ್ರು—ಅಮ್ಮಾ, ಕೇಳಿದಿರಾ! ಈ ಬಾಣದಿಂದ ನನಗೆ ಮುಂದೆ ಕಲ್ಯಾಣವಾಗುವುದಂತೆ. ಇರಲಿ. ಇದು ಉಪಯೋಗಕ್ಕೆ ಬಂದೇ ಬರುವುದು. ಬನ್ನಿರಿ ಹೋಗೋಣ.

[ಹೋಗುವರು.]

---

## ದೃಶ್ಯ ೫

[ಮಣಿಪುರದ ಹೊರಬೀದಿ. ಅರ್ಜುನ; ವೃಷಕೇತು; ಮೇಘವರ್ಣ; ನೀಲಧ್ವಜರು.]

ವೃಷಕೇತು—(ಓಡಿಬರುತ್ತ) ಅದೋ ನಮ್ಮ ಯಜ್ಞಾಶ್ವವು ಅದಾವುದೋ ಪಟ್ಟಣದ ಹೆಬ್ಬಾಗಿಲನ್ನು ಸೇರುತ್ತಿರುವುದು.

ಅರ್ಜುನ—ಅಹುದು; ನೀಲಧ್ವಜ, ಇದಾವ ಪಟ್ಟಣ? ಸೌಂದರ್ಯಾತಿಶಯದಲ್ಲಿ ಇಂದ್ರಪುರವನ್ನೂ ಮೀರಿರುವಂತೆ ತೋರುವುದು.

ವೃಷಕೇತು—ಎಂಥಾ ಮನೋಹರವಾದ ಉದ್ಯಾನಗಳು!

ಮೇಘ—ಅಹುದು! ಎಂಥಾ ಉನ್ನತವಾದ ಗೋಪುರಗಳು! ಅವು ಆಕಾಶವನ್ನೇ ಚುಂಬಿಸುವಂತಿವೆ.

ನೀಲ—ಅಹುದು; ಅಹುದು. ಪಾರ್ಥನೇ! ಇದೋ, ಇದೇ ಮಣಿಪುರವು. ಈ ನಗರವು ವೈಭವದಲ್ಲಿ ವೈಜಂತಿಯನ್ನೂ, ಐಶ್ವರ್ಯದಲ್ಲಿ ಅಲಕಾವತಿಯನ್ನೂ, ಸೌಂದರ್ಯದಲ್ಲಿ ವೈಕುಂಠವನ್ನೂ ಮೀರಿರುವುದು. ಬಭ್ರುವಾಹನನೆಂಬ ವೀರಾಗ್ರೇಸರನು ಈ ನಗರಾಧಿಪತಿಯಾಗಿರುವನು. ನಾವೆಲ್ಲರೂ ಆತನಿಗೆ ಸಾಮಂತರಾಜರಾಗಿರುವೆವು. ಐಶ್ವರ್ಯದಲ್ಲಿಯೂ, ಕಾರ್ಯದಲ್ಲಿಯೂ, ಬುದ್ಧಿಯಲ್ಲಿಯೂ ಆತನಿಗೆ ಭೂಲೋಕದಲ್ಲಿ ಎರಡನೆಯವರಿಲ್ಲರೆಂದು ನಿಸ್ಸಂದೇಹವಾಗಿ ಹೇಳಬಹುದು. ಧರ್ಮಾಧರ್ಮಾದಿಗಳನ್ನೂ ವೇದವಿಧಿಗಳನ್ನೂ ಆತನು ಚೆನ್ನಾಗಿ ಬಲ್ಲನು. ಪ್ರಜೆಗಳು ತನ್ನ ಸಹೋದರರೆಂದೇ ಭಾವಿಸಿ ತನ್ನ ಸರ್ವಸ್ವವನ್ನೂ ಪ್ರಜೆಗಳಿಗರ್ಪಿಸಿರುವನು. ಅಲ್ಲದೆ ಆತನು ಅಸೂಯಾರಹಿತನು, ನಿಷ್ಪಕ್ಷಪಾತಿಯು, ದಯಾರ್ದ್ರಹೃದಯನು. ಆತನ ಗುಣಗಳನ್ನು ಹೊಗಳಿದಷ್ಟೂ ಸಾಲದು. ಯುದ್ಧದಲ್ಲಿ ಆತನನ್ನು ಸೋಲಿಸುವಂಥ ವೀರರು ನಮ್ಮ ಸೈನ್ಯದಲ್ಲಿರುವಂತೆ ಕಾಣೆನು. ಪಾರ್ಥ! ನೀನು ಬಹಳ ಎಚ್ಚರವಾಗಿರಬೇಕು. ನಿನ್ನ ಯಜ್ಞಾಶ್ವವನ್ನು ಆತನು ಕಟ್ಟದಿರಲಾರನು.

ವೃಷಕೇತು—ನೀಲಧ್ವಜ! ಏನೆಂದೆ? ಆತನನ್ನು ಸೋಲಿಸತಕ್ಕ ವೀರರು ನಮ್ಮ ಸೈನ್ಯದಲ್ಲಿಲ್ಲವೇ? ಒಂದೇ ಒಂದು ಬಾಣದಲ್ಲಿ ಬ್ರಹ್ಮಾಂಡದಷ್ಟು ಭಾರವಿದ್ದ ಕೃಷ್ಣನನ್ನೂ ಅವನ ರಥವನ್ನೂ ಸಹಸ್ರಯೋಜನ ದೂರಹಾರಿಸಿದ ಮಹಾವೀರ ಕರ್ಣನ ಸುತನಿಗೆ ಆತನು ಎಣೆಯೇ? ನೀಲಧ್ವಜ! ನೋಡೋಣವಂತೆ. ನಾವೇನೂ ಬಳೆಯನ್ನು ತೊಟ್ಟುಕೊಂಡವರಲ್ಲ. ನಮ್ಮೆದುರಿನಲ್ಲಿ ನಿಂತು ಯುದ್ಧಮಾಡುವಾಗ ಆತನ ಶೂರತನವು ಹೊರಬೀಳುವುದು.

ಮೇಘವರ್ಣ—ನಾನು, ಮರಕಲ್ಲುಗಳನ್ನು ತಂದು ಅವನ ಸಂಗಡ ಹೋರಾಡಿ ನನ್ನ ತಂದೆಯಾದ ಘಟೋತ್ಕಚನ ಶೌರ್ಯವನ್ನು ಪ್ರದರ್ಶಿಸುವೆನು. ಅದೂ ಸಾಲದಿದ್ದರೆ ನನ್ನ ಮಾಯಾವಿದ್ಯೆಯಿಂದ ಅವನು ನಿಂತಲ್ಲಿಯೇ ಅವನಿಗೆ ನೀರುಕುಡಿಸುವೆನು; ನೋಡೋಣ! ನನ್ನ ಮಾಯಾಶಕ್ತಿಯೆದುರಿನಲ್ಲಿ ಅವನ ಆಡಂಬರವು ಎಷ್ಟರಮಟ್ಟಿಗೆ ನಡೆಯುವುದೋ ನೋಡೋಣ.

ನೀಲಧ್ವಜ—(ನಗುತ್ತ) ವೀರನೇ, ನೀವಿನ್ನೂ ಚಿಕ್ಕವರು; ಬರೀ ಮಾತಿನ ಹರಟೆಯಾಕೆ? ಅವನನ್ನು ಕಂಡು ಇದಿರಿಸಿ, ಯುದ್ಧಮಾಡಿ ತಕ್ಕ ಅನುಭವವನ್ನು ಪಡೆದು ಆ ಮೇಲೆ ಮಾತಾಡುವಿರಂತೆ.

ಅರ್ಜುನ—ನೀಲಧ್ವಜ! ಗಾಂಡೀವವೂ ಪಾಶುಪತಾಸ್ತ್ರವೂ ನನ್ನ ಕೈಯಲ್ಲಿರಲು, ಕಾಳಭೈರವನೇ ನಮ್ಮ ಸಂಗಡ ಯುದ್ಧಕ್ಕೆ ನಿಂತರೂ ನಮಗೆ ಜಯವಾಗದಿರದು. ಈಗ ನಮ್ಮ ಯಜ್ಞಾಶ್ವವು ಪುರಪ್ರವೇಶ ಮಾಡಿರಬಹುದು. ನಾವಿಲ್ಲೇ ಬೀಡು ಬಿಡುವುದುತ್ತಮ. ಈ ಸ್ಥಳದಲ್ಲಿ ನಮ್ಮ ಸೈನ್ಯಕ್ಕೆ ತಕ್ಕ ವಸತಿಯನ್ನುಂಟುಮಾಡಿ ಮಣಿಪುರಪರಸನ ಆಗ ಮನವನ್ನು ನಿರೀಕ್ಷಿಸೋಣ. (ಅತ್ತಿತ್ತ ನೋಡುವನು.) ಆಹಾ! ಇದೆಷ್ಟು ರಮ್ಯವಾದ ಪ್ರದೇಶ! ಸುರೇಶನ ನಂದನವನದ ಸೊಬಗು ಈ ಪ್ರದೇಶದ ಬೆಡಗಿನ ಕಾಲಂಶದಷ್ಟೂ ಇರದು.

ನೀಲಧ್ವಜ—ಅಹುದು; ನೋಡಲ್ಲಿ! ಸರೋವರಗಳೋ ನೀರಿನಿಂದ ತುಂಬಿತುಳುಕುತ್ತಿವೆ. ತಾವರೆಗಳು ಅರಳಿ, ವರ್ಷಋತುವಿನ ಉಪಕಾರ ವನ್ನು ಸ್ಮರಿಸುತ್ತಿವೆ. ಇತ್ತಲೋ ಉದ್ಯಾನವನದ ಗಿಡಬಳ್ಳಿಗಳು ತಮ್ಮನ್ನು ತೊಳೆದು ಶುಭ್ರವಾಗಿ ಮಾಡಿದ ಮೇಘರಾಜನನ್ನು ನೆನಸುತ್ತ ಮಂದ ಹಾಸದಿಂದ ಮಂದಾನಿಲನ ಸಂಗಡ ಚಕ್ಕಂದವಾಡುತ್ತಾ ತಲೆಯನ್ನು ಉಲ್ಲಾಸದಿಂದ ತೂಗಾಡಿಸುತ್ತಿರುವುವು.

ಅರ್ಜುನ—ಅಹುದು; ಈ ಪ್ರದೇಶವು ಅತ್ಯಂತ ರಮ್ಯವಾಗಿದೆ. ನೋಡಿಲ್ಲಿ-ಈ ಮೈದಾನಿಗೆ ವರ್ಷರಾಜನು ಗಟ್ಟಿಪಚ್ಚೆಯ ಶೀರೆಯನ್ನು ತೊಡಿಸಿ, ವಿವಿಧ ಬಣ್ಣಗಳ ಹೂಗಳನ್ನು ಮುಡಿಸಿರುವನು. ಇದೋ! ಇಲ್ಲಿ ನೋಡು-ಕೆಂಧೂಳಿನಿಂದ ನಿಬಿಡವಾದ ಈ ಹಾದಿಯನ್ನು ತೊಳೆದು ಕಲುಷಿತರಹಿತವಾಗಿ ಮಾಡಿರುವನು. ಆ ವನವೆಷ್ಟು ರಮ್ಯವಾಗಿರುವುದು! ವರ್ಷನ ದೀರ್ಘ ಬಾಹುಬಂಧನದಿಂದ ತಪ್ಪಿಸಿಕೊಂಡು ಆತನ ಚುಂಬನ ಕಾಲದಲ್ಲಿ ಬಾಯಿಂದ ಬಿದ್ದ ಜಲಕರ್ಣಗಳ ದೀರ್ಘಧಾರೆಯಿಂದ ಶುಭ್ರ ವಾಗಿ ಹೊಸ ಕಾಂತಿಯನ್ನು ಪಡೆದು ಮನೋಹರವಾಗಿ ವನದೇವತೆಯು ಒಪ್ಪುತ್ತಿರುವಳು. ಆದರೆ ಇದೇನು? ನೋಡಿತ್ತ! ನಭೋಮಂಡಲದಲ್ಲಿ ರಣಹದ್ದಿನಾಕಾರದ ಮೋಡಗಳು ತುಂಬಿಕೊಂಡಿವೆ. ಇತ್ತ ನೋಡು!

ಉತ್ಪಾತಗಳು ಪ್ರಳಯಕಾಲದ ಆಗಮನವನ್ನು ನಿರೀಕ್ಷೆಮಾಡುವಂತಿವೆ. ಇಲ್ಲಿ ನೋಡು! ಇಷ್ಟೊಂದು ಹದ್ದುಗಳೆಲ್ಲಿಂದ ಬರುತ್ತಿರುವುವು. ಹೋ! ಆ ಕಡೆಯೇ ಗೂಬೆಗಳ ಭೀಕರವಾದ ಧ್ವನಿಗೆ ಆ ಸ್ಥಳವೆಲ್ಲಾ ಪ್ರತಿಧ್ವನಿ ಕೊಡುತ್ತಲಿವೆ. ಅಬ್ಬಬ್ಬ! ಇದೇನೀ ಮುದಿಹದ್ದು ನನ್ನ ಕಿರೀಟವನ್ನ ಲಂಕರಿಸಲು ಬರುವುದೇ? ಛೆ! ಛೆ!! (ಮುದಿಹದ್ದು ಬರುತ್ತಿರುವುದು)

ಮೇಘ—ಹೋಹೊ! ಈ ಮುದಿ ಹದ್ದಿಗೆ ಭಯವೇ ಇಲ್ಲವೇ?

ವೃಷಕೇತು—ತಡೆ, ತಡೆ. ನಾನೀ ಬಾಣದಿಂದ ಅದರ ಹೃದಯ ವನ್ನು ಇರಿದು ಹೀನಪ್ರಾಣಿಗಳ ಮಾಂಸಾಹಾರದಿಂದ ಬಲಿತ ಅದರ ಶರೀರದ ಖಂಡವನ್ನು ತುಂಡುತುಂಡಾಗಿ ಸೀಳುವೆನು. (ಬಾಣ ಬಿಡು ವನು; ಹದ್ದು ಸಾಯುವುದು.)

ನೀಲಧ್ವಜ—ಅರ್ಜುನ! ವೀರಾಗ್ರೇಸರ! ಮನಗುಂದಬೇಡ. ಈ ಅಪಶಕುನಗಳು ನಮ್ಮ ಮುಂದಿನ ಕಷ್ಟಗಳ ಅವಧೂತವಾಗಿರಬಹುದು. ಆದರೂ ಶ್ರೀಕೃಷ್ಣನ ಪೂರ್ಣ ಕೃಪಾಕಟಾಕ್ಷವು ನಿನ್ನ ಮೇಲಿರುವುದರಿಂದ ಅಪಾಯವೇನೂ ಒದಗದು.

ಅರ್ಜುನ—ನೀಲಧ್ವಜ! ಆದರೂ ನನಗೇಕೋ ಭೀತಿಯಾಗುತ್ತಿದೆ. ಕಾರ್ಮುಗಿಲು ಆಕಾಶಮಂಡಲವನ್ನು ಮುಸುಕಲು ಹೇಗೆ ತಪ್ಪದೆ ಮಳೆ ಸುರಿವುದೋ ಹಾಗೆಯೇ ನನ್ನ ಹೃದಯವನ್ನೀಗ ಮುಸುಕಿರುವ ಸಂಶಯ ಭೀತಿಯು ಮುಂದೆ ಕಷ್ಟಗಳನ್ನು ತಂದೊಡ್ಡದಿರದು. ದೇವರ ಚಿತ್ತ ಎಂತಿದೆಯೋ? ಹೇಗೆ ತಿಳಿಯಲಿ?

ನೀಲಧ್ವಜ—ಭಕ್ತರ ಶ್ರೇಯಸ್ಸನ್ನೇ ನಿತ್ಯವೂ ಕೋರುತ್ತ ಭಕ್ತ ರನ್ನು ಪಾಲಿಸುತ್ತಿರುವ ಭಕ್ತವತ್ಸಲ ಮುರಾಂತಕನಿಗೆ ನೀನು ಭಕ್ತಶ್ರೇಷ್ಠ ನಾಗಿರುವುದರಿಂದ ನಿನಗೆ ಭಯವೆಲ್ಲಿಯದು?

ಅರ್ಜುನ—ನೀವು ಹೇಳುವುದೆಲ್ಲವೂ ಸರಿಯಾಗಿರಬಹುದು. ಆದರೆ ನಮ್ಮ ಕರ್ಮದಿಂದ ನಾವು ಬಂಧಿತರಾಗಿರುವುದರಿಂದ ಭಕ್ತವತ್ಸಲ ನಾದರೂ ಏನು ಮಾಡಬಲ್ಲನು? ಅದೇನೋ ನನಗೆ ಈ ಸಂದರ್ಭದಲ್ಲಿ ಭಯವೆಗ್ಗಳಿಸುತ್ತಿರುವುದು. ಹಿಂದೆಂದೂ ನನಗೀ ರೀತಿ ಭಯವಾಗುತ್ತಿರ ಲಿಲ್ಲ.

ನೀಲಧ್ವಜ—ಆದರೂ ದುರಿತ ದಮನನೂ, ಮಾನವ ಬಂಧ ವಿಮೋಚಕನೂ ಆದ ಆ ಆದಿಕೇಶವನನ್ನು ಧ್ಯಾನಮಾಡಿದರೆ ನಿನ್ನ ಭೀತಿಗಳೆಲ್ಲವೂ ಸೂರ್ಯೋದಯವಾದೊಡನೆ ಮಾಯವಾಗುವ ತಮೋರಾಶಿಯಂತೆ ಕಾಣದಾಗುವುವು. ನಾವೆಲ್ಲರೂ ಈಗ ಆ ಮುರಾಂತಕನ ಧ್ಯಾನ ಮಾಡೋಣ.

[ಎಲ್ಲರೂ ಕೈಜೋಡಿಸಿ ಪ್ರಾರ್ಥಿಸುವರು.]

ಅರ್ಜುನ—ಹಾಗೆಯೇ ಆಗಲಿ, ಎಲೈ ಸರ್ವಲೋಕಪೂಜ್ಯನಾದ ಕೃಷ್ಣ! ದಯಾಸಾಗರ! ಭಕ್ತವತ್ಸಲಾ! ಸಕಲಜನ ಪಾಪನಾಶಕ! ನಿಷ್ಕಲಂಕ! ಶೋಕ ಹಾರಕ! ನಿನ್ನ ಭಕ್ತರ ಮೇಲೆ ಕೃಪೆಯಿಡು, ಕೃಪೆಯಿಡು. ದೀನ ದಯಾಳುವೇ! ಆಗಮಗೋಚರನೇ! ನಿನ್ನನ್ನೇ ಸದಾ ಧ್ಯಾನಿಸುತ್ತಿರುವೆವು! ನಿನ್ನ ಆ ಕೃಪಾಕಟಾಕ್ಷವನ್ನೊಮ್ಮೆಗೆ ಬೀರಬಾರದೇನು!

---

# ದೃಶ್ಯ ೬

## ಮಣಿಪುರ

[ಬಭ್ರುವಾಹನನ ಆಸ್ಥಾನ—ಸಾಮಂತರೂ, ಸೇನಾಧಿಪತಿ, ಮಂತ್ರಿ (ಸುಬುದ್ಧಿ) ಸಭಿಕರೂ ಕುಳಿತಿರುವರು.]

ವಂದಿಮಾಗಧರು—ಪರಾಕು! ಪರಾಕು! ಲೋಕೈಕವೀರ ಮಣಿಕುಲಲಲಾಮ! ಜಗತ್ಪ್ರಸಿದ್ಧ ಭೀಮ! ಸಕಲೈಶ್ವರ್ಯ ಪ್ರಚಂಡ! ಸಪ್ತಸಾಗರ ಗಂಡ! ಉದ್ದಂಡಾದಿ ನೃಪಾನ್ವಯದಂಡ! ಮಹಾಮಂಡಲೇಶ್ವರ ಬಭ್ರುವಾಹನ ಮಹಾರಾಜಾಧಿರಾಜಗೆ ಜೈ! ಜೈ!

[ಬಭ್ರುವಾಹನನು ಪ್ರವೇಶಿಸಿ ಆಸ್ಥಾನದಲ್ಲಿ ಕುಳಿತುಕೊಳ್ಳುವನು. ಸಭಿಕರು ನಮಸ್ಕರಿಸಿ ಕುಳಿತುಕೊಳ್ಳುವರು.]

ಬಭ್ರುವಾಹನ—(ನಿಂತು) ಪ್ರಿಯ ಸಹೋದರರಿರಾ! ವೀರಾಗ್ರೇಸರರಿರಾ! ರವಿಯು ಪಶ್ಚಿಮ ಸಮುದ್ರವನ್ನು ಸೇರುತ್ತಿರಲು ಅವಸರದಿಂದ ನಿಮ್ಮನ್ನೆಲ್ಲಾ ಬರಮಾಡಿಕೊಂಡ ಕಾರಣವು ಮಹಾಗಾಥವಾಗಿರುವುದು.

ನೃಪಕುಲೋತ್ತಮರೇ, ವೀರಾಗ್ರೇಸರರೇ, ಸಾವಿರಾರು ಕಾಳಗಗಳಲ್ಲಿ

ಜಯಪತಾಕೆಗಳನ್ನೆತ್ತಿದ ಕ್ಷತ್ರಿಯ ಕುಲಮಣಿಗಳೇ! ನಿಮ್ಮನ್ನೆಲ್ಲಾ ನಿಮ್ಮ ನಿಮ್ಮ ನಿತ್ಯಕರ್ಮಗಳನ್ನಾಚರಿಸುವುದಕ್ಕೂ ಬಿಡದೆ ಬಹಳ ಅವಸರದಿಂದ ಕರೆಯಿಸಿಕೊಂಡದ್ದಕ್ಕೆ ನೀವು ಬೇಸರವನ್ನು ವಹಿಸಬಾರದೆಂದು ಹಾರೈಸುತ್ತೇವೆ. ಈಗ ಮಹಾಕಾರ್ಯವೊಂದು ಜರಗಿರುವುದು. ಅದಕ್ಕೆ ನಿಮ್ಮೆಲ್ಲರ ಮಂತ್ರಾಲೋಚನೆಯು ಅತ್ಯಗತ್ಯವು. ಈ ಸಾಯಂಕಾಲ ಯಾವುದೋ ಒಂದು ಯಜ್ಞಾಶ್ವವು ನಮ್ಮ ಪುರವನ್ನು ಪ್ರವೇಶಿಸಿ ಬಹಳ ಹೆಮ್ಮೆಯಿಂದ ತಿರುಗುತ್ತಿತ್ತು. ಅದರ ಹೆಮ್ಮೆಯನ್ನು ತಗ್ಗಿಸಲು ಕುಲಪದ್ಧತಿ ಪ್ರಕಾರ ಅದನ್ನು ಬಂಧಿಸಿರುವೆವು. ವಂಶಪಾರಂಪರ್ಯವಾಗಿ ನಡೆದು ಬಂದಿರುವ ಧರ್ಮಕ್ಕನುಸಾರವಾಗಿ ಯಜ್ಞಾಶ್ವವನ್ನು ಕಟ್ಟಿಹಾಕಿ ಕ್ಷತ್ರಿಯರಾದ ನಾವು ಅದರ ಬೆಂಬಲದ ಸೈನ್ಯದ ಸಂಗಡ ಯುದ್ಧಮಾಡಬೇಕೆಂಬುದು ನಿಮಗೆಲ್ಲಾ ತಿಳಿದ ಸಂಗತಿಯಾಗಿದೆ. ನಾವು ಕ್ಷತ್ರಿಯ ವೀರ್ಯದಿಂದುತ್ಪನ್ನರಾದವರು. ಸಕಲ ಧರ್ಮಗಳನ್ನೂ ಪಾಲಿಸುವವರು. ಎಲ್ಲಾ ಸಂಪ್ರದಾಯಗಳನ್ನೂ, ಕಟ್ಟುಕಟ್ಟಲೆಗಳನ್ನೂ ಪಾಲಿಸತಕ್ಕವರು.

ಆದುದರಿಂದ ಈಗ ಆ ಯಜ್ಞಾಶ್ವದ ಬೆಂಬಲವಾಗಿ ಬಂದಿರುವ ವೀರರ ಸಂಗಡ ಯುದ್ಧಮಾಡುವುದು ನಮ್ಮ ಧರ್ಮವು. ಎಲೈ ವೀರಾಗ್ರಣಿಗಳೇ! ಕ್ಷತ್ರಿಯ ಕುಲೋತ್ಪನ್ನರಾದ ರಣಧೀರರೇ! ಕುಲತಿಲಕರೇ! ನಿಮ್ಮಲ್ಲಿ ಯಾರಾದರೂ ಯುದ್ಧಮಾಡದೆ ಈ ಯಜ್ಞಾಶ್ವವನ್ನು ಕಪ್ಪಕಾಣಿಕೆ ಸಹಿತ ಅದುರುಗುಂಡಿಗೆಯವರಂತೆ ಅರ್ಪಿಸಲು ಒಡಂಬಡುವವರು ಇದ್ದಾರೆಯೇ! (ಕುಳಿತುಕೊಳ್ಳುವನು.)

ಸಭಿಕರು—ಛೀ! ಛೀ! ಅಂಥಾ ಹೇಡಿಗಳು ನಮ್ಮಲ್ಲಿ ಯಾರೂ ಇಲ್ಲ.

ಬಭ್ರುವಾಹನ—ಸಭಿಕರೇ! ಚೆನ್ನಾಗಿ ಆಲೋಚಿಸಿ ನೋಡಿರಿ. ನಾನು ಹೇಳಿದ ಮಾತ್ರಕ್ಕೆ ನೀವೆಲ್ಲಾ ಒಪ್ಪಿಕೊಳ್ಳುವುದು ಸರಿಯಲ್ಲ.

ಸೇನಾಧಿಪತಿ—ಮಹಾರಾಜಾಧಿರಾಜ! ಜೀವವು ನನ್ನೀ ಶರೀರದಲ್ಲಿ ಇರುವ ತನಕ ಯಜ್ಞಾಶ್ವವನ್ನೆಂದಿಗೂ ಯುದ್ಧದಲ್ಲಿ ಮಡಿಯದ ವಿನಹಾ ಬಂಧನವಿಮುಕ್ತವನ್ನಾಗಿ ಮಾಡಬಾರದೆಂಬುದೇ ನನ್ನ ಮತವು.

ಸುಬುದ್ಧಿ—ಜೀಯಾ! ನನ್ನನ್ನು ತುಂಡುತುಂಡಾಗಿ ಕತ್ತರಿಸಿದರೂ ಯಜ್ಞಾಶ್ವವನ್ನು ಸುಮ್ಮನೆ ಕೊಡಲು ಬಿಡೆನು.

ಸಭಿಕ—ನನ್ನ ರುಂಡವುದುರಿ ನೆಲಕ್ಕೆ ಬೀಳುವ ವರೆಗೆ ಯಜ್ಞಾಶ್ವವನ್ನು ಕೊಡಲು ಬಿಡೆನು.

ಸಾಮಂತರೂ ಸಭಿಕರೂ—ಹೆಚ್ಚೇಕೆ? ಯುದ್ಧರಂಗದಲ್ಲಿ ಮಡಿದು ನಾವು ವೀರಸ್ವರ್ಗವನ್ನು ಹೊಂದಿದ ನಂತರ ಆ ಯಜ್ಞಾಶ್ವವು ಶತ್ರುಗಳ ಕೈಸೇರಲಿ.

ಬಭ್ರುವಾಹನ—ಶಹಭಾಸ್! ವೀರರೇ! ನಿಮ್ಮಂಥ ಶೂರರು ಈ ನಮ್ಮ ರಾಜ್ಯದಲ್ಲಿರುವುದರಿಂದಲ್ಲವೇ ಅರಿನೃಪರು ತಲೆಯೆತ್ತದಿರುವರು. ನನ್ನೀ ದೇಹವು ಛಿನ್ನಭಿನ್ನವಾಗುವವರೆಗೆ ಹೋರಾಡಿ ವೀರಸ್ವರ್ಗವನ್ನು ಹೊಂದುವೆನೇ ಹೊರತು ಯಜ್ಞಾಶ್ವವನ್ನು ಶತ್ರುಗಳಿಗೆ ಕಪ್ಪಕಾಣಿಕೆ ಸಮೇತ ಅರ್ಪಿಸೆನು. ಮಂತ್ರಿವರ್ಯನೇ. ನಮ್ಮ ಅಭಿಮತವನ್ನು ಶತ್ರುಸಂಗಡದವರಿಗೆ ತಿಳಿಸು. ಪ್ರಿಯ ವೀರಾಗ್ರೇಸರರೇ! ಈ ಅವಘಡದಲ್ಲಿ ನಾವೆಲ್ಲರೂ ಸಹೋದರರಂತೆ ವರ್ತಿಸಿದುದನ್ನು ನೋಡಿ ಮಹದಾನಂದಪಡಬೇಕಾಗಿದೆ.

ಚಿತ್ರಾಂಗದೆ—(ದುಡುಕಿನಿಂದ ಪ್ರವೇಶಿಸುವಳು-ಸಭಿಕರೂ ಬಭ್ರುವಾಹನನೂ ಏಳುವರು.) ಏನು? ಏನೀ ವಿಪರೀತ ಬುದ್ಧಿ? ಏನೀ ಪೌರುಷದ ಮಾತುಗಳು? ವಾಗಾಡಂಬರದ ಗರ್ಜನೆ? ಮಗುವೇ! ನಿನಗೇನು ಹುಚ್ಚು ಹಿಡಿದಿದೆಯೇ! ಸಕಲಶಾಸ್ತ್ರಪಾರಂಗತನಾದ ನೀನು ಕುಲಕಂಟಕನಾಗಿ ಪರಿಣಮಿಸಬೇಕೆಂದಿರುವೆಯಾ?

ಬಭ್ರುವಾಹನ—ಅಮ್ಮಾ! ಇದೇಕೆ ಹೀಗೆ ಮಾತಾಡುತ್ತಿರುವೆ? ಯಜ್ಞಾಶ್ವವು ನಮ್ಮ ಪುರವನ್ನು ಪ್ರವೇಶಿಸಿದರೆ ಅದನ್ನು ಬಂಧಿಸಿ, ಅದರ ಬೆಂಬಲದ ವೀರರ ಸಂಗಡ ಯುದ್ಧಮಾಡುವುದು ವೀರರ ಧರ್ಮವಲ್ಲವೇ?

ಚಿತ್ರಾಂಗದೆ—ನಿನ್ನ ಧರ್ಮವನ್ನು ಸುಡು. ನನ್ನ ಹೊಟ್ಟೆಯಲ್ಲಿ ಹುಟ್ಟಿ ನನ್ನ ಎದೆಗೆ ಶೂಲದಲ್ಲಿರಿಯಲೆತ್ನಿಸಿರುವೆಯಾ? ಅಯ್ಯೋ ನನ್ನ ಅದೃಷ್ಟವೇ? ನನ್ನ ಮನೋವಾಂಛಿತವು ನೆರವೇರಿತೆಂದೆಣಿಸಿ ಯಜ್ಞಾಶ್ವದ ಆಗಮನದಿಂದ ಆನಂದಸಾಗರದಲ್ಲಿ ಮುಳುಗಿದ್ದೆನು. ಈ ಕುಲಕಂಟಕನಿಂದ

ನನ್ನ ಮನೋರಥವು ನೆರವೇರದಂತಾಗುವ ಪ್ರಸಂಗ ಬಂತೇ? ಸಕಲ ವಿದ್ಯಾವಿಶಾರದನಾಗಿಯೂ ನಿನ್ನ ಪಿತನನ್ನು ಗುರುತಿಸದೆ ಆತನ ಸಂಗಡ ಯುದ್ಧಮಾಡಲು ಸಿದ್ಧನಾಗುತ್ತಿರುವೆಯಲ್ಲವೇ?

ಸುಬುದ್ಧಿ! ಅದೇನಾ ಪತ್ರ? ಇತ್ತಕೊಡು. (ನಡುಗುತ್ತ ಮಂತ್ರಿಯು ಕೊಡುವನು; ಚಿತ್ರಾಂಗದೆಯು ಹರಿದು ಹಾಕುವಳು.) ಬಭ್ರುವಾಹನನೇ! ಹಸ್ತಿನಾವತಿಯ ಅರ್ಜುನನು ನಿನ್ನ ಪಿತನೆಂಬುದನ್ನು ಮರೆತಿರುವೆಯಾ? ನೀನೆನ್ನುದರದಲ್ಲಿ ಜನಿಸಿದವನಾದರೆ ಯಜ್ಞಾಶ್ವವನ್ನು ನಿನ್ನ ಬೊಕ್ಕಸ-ಭಂಡಾರ ಸಮೇತ ಅರ್ಜುನನಿಗೆ ಅರ್ಪಿಸಿ ಆತನನ್ನು ಸನ್ಮಾನದಿಂದ ಕರಕೊಂಡು ಬಾ.

ಬಭ್ರುವಾಹನ—ಅವ್ಮಾ ಕ್ಷಮಿಸು. ನನಗೀ ಸಂಗತಿ ತಿಳಿದಿದ್ದರೆ ನಾನೀ ರಾತ್ರಿ ಸಭೆಯನ್ನು ಸೇರಿಸಿ ಯುದ್ಧದ ಪ್ರಸ್ತಾಪವನ್ನೆತ್ತುತ್ತಿದ್ದೆನೇ? ಆ ಕುದುರೆಯ ಹಣೆಯಲ್ಲಿ ಹಸ್ತಿನಾವತೀಪುರದ ಅರ್ಜುನನ ಪ್ರಸ್ತಾಪವೇ ಇಲ್ಲದಿದ್ದುದರಿಂದ ಇಂಥ ಅನರ್ಥವುಂಟಾಗುವ ಪ್ರಸಂಗವೊದಗಿತು. ಅವ್ಮಾ! ನಿನ್ನಪ್ಪಣೆಯನ್ನು ಶಿರಸಾವಹಿಸುರುವೆನು. ಇಂದು ಮಹದಾನಂದವಾಯಿತು. ನನ್ನ ಜನ್ಮದಾತನನ್ನೀ ನೋಡುವ ಸುಸಂದರ್ಭವೊದಗಿತು. ಸಹೋದರರಿರಾ! ನಮ್ಮ ಮಾತುಶ್ರೀಯವರ ಮಾತುಗಳನ್ನು ಕೇಳಿದಿರಲ್ಲವೇ? ನಾವು ಅವರ ಅಪ್ಪಣೆಯಂತೆ ನಡಕೊಳ್ಳೋಣ

ಸಭಿಕರು—ಮಹಾಪ್ರಭುವೇ! ಅಂತೆಯೇ ಆಗಲಿ.

ಬಭ್ರುವಾಹನ—ಮಂತ್ರಿವರ್ಯನೇ! ಪಟ್ಟಣವನ್ನೆಲ್ಲಾ ಈಗಲೀಗ ಧ್ವಜಪತಾಕೆಗಳಿಂದಲೂ, ತಳಿರುತೋರಣಗಳಿಂದಲೂ ಶೃಂಗರಿಸಿ ಸ್ವರ್ಗಲೋಕದ ಸೌಂದರ್ಯವನ್ನು ಚಿಪ್ಪುಗೊಳಿಸುವಂತೆ ಮಾಡು. ಬೊಕ್ಕಸದಲ್ಲಿರುವ ಅಮೂಲ್ಯವಾದ ರತ್ನಾಭರಣಗಳನ್ನು ಕರಡಿಗೆಗಳಲ್ಲಿ ತುಂಬಿ ಸರ್ವಾಲಂಕಾರ ಭೂಷಿತೆಯರಾದ ನವಜವ್ವನೆ ನಾರೀಮಣಿಯರಿಂದ ಹೊರಿಸಿಕೊಂಡು, ಕಲಶಗನ್ನಡಿ, ಮಂಗಲವಾದ್ಯ ತಕ್ಕ ಪರಿವಾರ ಸಮೇತ ಯಜ್ಞಾಶ್ವವನ್ನು ಶೃಂಗರಿಸಿ ನಾಳೆ ಪ್ರಾತಃಕಾಲ ಹಿಡಿದುಕೊಂಡು ಬಾ. ಸೇನಾಧಿಪತಿಯೇ! ನಿನ್ನ ಸೈನ್ಯವೆಲ್ಲವನ್ನೂ ಬರಮಾಡಿಕೊಂಡು ನಮ್ಮನ್ನು ಹಿಂಬಾಲಿಸು; ನಾಳೆ ಸೂರ್ಯೋದಯದ ಪೂರ್ವವೇ ಸಕಲಾಲಂಕಾರ ಭೂಷಿತನಾಗಿ ಕಾದಿರು.

ಮಂತ್ರಿ; ಸೇನಾಧಿಪತಿ—ಅಪ್ಪಣೆ.

ಬಭ್ರುವಾಹನ—ನನ್ನ ಜನ್ಮವು ಇಂದಿಗೆ ಸಾರ್ಥಕವಾಯಿತಮ್ಮಾ! ಹುಟ್ಟಿದಂದಿನಿಂದ ಪಿತನಾರೆಂದು ತಿಳಿಯದೆ ವ್ಯಾಕುಲಚಿತ್ತನಾಗಿದ್ದೆನು. ಈಗಲೀಗ ನನ್ನ ತಂದೆಯನ್ನು ಕಾಣುವ ಸಂದರ್ಭವೊದಗಿತು. ಹಾ! ಹಾ! ನಾನು ಕೃತಾರ್ಥನಾದೆನು. ಅಮ್ಮಾ! ನಾವಿನ್ನು ಹೋಗೋಣ

---

## ದೃಶ್ಯ ೭

### [ಮಣಿಪುರ—ಅರ್ಜುನನ ಶಿಬಿರ.]

[ಅರ್ಜುನ, ನೀಲಧ್ವಜ, ವೃಷಕೇತು, ಮೇಘವರ್ಣರು ಕುಳಿತಿರುವರು.]

ಅರ್ಜುನ—ಮಣಿಪುರದ ಶೌರ್ಯವಿಂದು ಬಯಲಾಯಿತು. ನೀಲಧ್ವಜಾ! ನೀನೇನೋ ಬಭ್ರುವಾಹನನ ವೀರ್ಯಶೌರ್ಯಾದಿಗಳನ್ನು ಕುರಿತು ಪ್ರಶಂಶಿಸುತಲಿದ್ದೆ. ಇದೋ! ಈಗಲೇ ಬೊಕ್ಕಸಭಂಡಾರ ಸಮೇತ ಬಂದು ಸಾಷ್ಟಾಂಗಪ್ರಣಾಮುವನ್ನು ಮಾಡಲಿಕ್ಕಿರುವನು.

ನೀಲಧ್ವಜ—ಪ್ರಭುವೇ! ಅದರಲ್ಲಿ ತಪ್ಪೇನಿರುವುದು? ಪುತ್ರನು ತಂದೆಗೆ ಸಾಷ್ಟಾಂಗ ಪ್ರಣಾಮುಮಾಡುವುದು ವಿಹಿತವು. ಬಭ್ರುವಾಹನನು ನಿನ್ನ ಪುತ್ರನೆಂದು ನನಗೆ ಮೊದಲೇ ತಿಳಿದಿದ್ದರೆ ನಾನೇ ಅವರ ಮನೆಗೆ ಹೋಗಿ ನಿನ್ನ ಬರೋಣವನ್ನು ಅರುಹಿ ಇಷ್ಟರಲ್ಲಿಯೇ ಅರಮನೆಗಳಲ್ಲಿ ಸುಖ ವಿಲಾಸಗಳಿಂದ ಕಾಲಕಳೆಯಲು ತಕ್ಕ ಸಿದ್ಧತೆಯನ್ನು ಮಾಡಿಸುತ್ತಿದ್ದೆನು.

ಅರ್ಜುನ—ಏನಂದೆ! ಬಭ್ರುವಾಹನನು ನನ್ನ ಮಗನೆಂದೆಯೇನು?

ಚಾರಕ—(ಪ್ರವೇಶಿಸಿ) ಮಹಾರಾಜ್! ಬಭ್ರುವಾಹನ ಮಹಾರಾಜರು ದ್ವಾರದಲ್ಲಿ ಬಂದು ಕಾದಿರುವರು. ಅವರೊಂದಿಗೆ ಸ್ತ್ರೀಯರೂ ಇರುವರು.

ಅರ್ಜುನ—ಏನು? ಹೆಂಗುಸರನ್ನು ಕರೆದುಕೊಂಡು ಬಂದು ಕಾದಿರುವನೇ? ಯಜ್ಞದೀಕ್ಷಿತನಾಗಿರುವುದರಿಂದ ಹೆಂಗುಸರ ಮುಖವನ್ನು

ನೋಡಲಾಗುವುದಿಲ್ಲವೆಂದು ಹೇಳು. ಆ ಬಭ್ರುವಾಹನನನ್ನು ಮಾತ್ರ ಬರಹೇಳು.

ಚಾರಕ—ಅಪ್ಪಣೆ. (ಹೋಗುವನು.)

ಅರ್ಜುನ—ಈ ಕುನ್ನಿಮರಿಯು ಅಳ್ಳೆದೆಯುಳ್ಳ ಸ್ತ್ರೀಯರ ಸಂಗಡ ಬಂದಿರುವನೇ!

ವೃಷಕೇತು—ಬಹುಶಃ ಸೀರೆಯನ್ನುಟ್ಟುಕೊಂಡು ಬಂದಿರುವನೋ ಏನೋ!

ಚಾರಕ—(ಪ್ರವೇಶಿಸಿ) ಜೀಯಾ! ಸ್ತ್ರೀಯರು ಬಭ್ರುವಾಹನನ ತಾಯಿ ಮತ್ತು ಚಿಕ್ಕಮ್ಮರಂತೆ. ಅವರೂ ತಮ್ಮ ಮಗನ ಸಂಗಡ ತಮ್ಮನ್ನು ಕಾಣಬೇಕೆಂದು ಹ..............

ಅರ್ಜುನ—ಓಹೋ! ಚೆನ್ನಾಗಿ ಗೊತ್ತಾಯಿತು. ಆ ಹೇಡಿ ತಾನಾಗಿ ಬಂದರೆ ಆಪತ್ತು ಸಂಭವಿಸಬಹುದೆಂದು ಹೆಂಗುಸರನ್ನು ಕರಕೊಂಡು ಬಂದಿರಬಹುದು. ಬರಲಿ; ಎಲ್ಲಾ ಚಮತ್ಕಾರವನ್ನು ನೋಡೋಣ. ಚಾರ! ಎಲ್ಲರನ್ನೂ ಬರಹೇಳು.

ಚಾರಕ—ಅಪ್ಪಣೆ. (ಹೋಗುವನು.)

[ಬಭ್ರುವಾಹನ, ಚಿತ್ರಾಂಗದೆ, ಉಲೂಪಿಯರ ಪ್ರವೇಶ. ಭಂಗಾರವನ್ನು ಹೊತ್ತ ಸುವಾಸಿನಿಯರು ಪೊರೆಯನ್ನು ಕೆಳಗಿಳಿಸುವರು. ಬಭ್ರುವಾಹನ, ಚಿತ್ರಾಂಗದೆ, ಉಲೂಪಿಯರು ನಮಸ್ಕರಿಸುವರು. ಸುಬುದ್ಧಿ ಮತ್ತು ಇತರರು ದೂರ ನಿಲ್ಲುವರು.]

ಬಭ್ರುವಾಹನ—ಪಿತನೇ! ಕುಶಲವೇ? (ಅರ್ಜುನನು ಕಣ್ಣು ಕೆರಳಿಸುವನು.)

ಚಿತ್ರಾಂಗದೆ—(ಸ್ವಗತ) ನನ್ನ ಭಾಗ್ಯೋದಯವಾಯಿತು. ತಮದಿಂದ ಬೇರ್ಪಡಿಸಲ್ಪಟ್ಟಿದ್ದ ಹೆಣ್ಣು ಹಂಸವು ಸೂರ್ಯೋದಯದಲ್ಲಿ ತನ್ನಿನಿಯನನ್ನು ಕಂಡು ಎಷ್ಟು ಆನಂದಪಡುವದೋ ಅದಕ್ಕಿಂತಲೂ ಇಮ್ಮಡಿಯಾದ ಆನಂದವನ್ನು ನನ್ನೀ ಹೃದಯವು ಹೊಂದಿರುವುದು. (ಪ್ರಕಾಶ) (ನಗುತ್ತ) ಪ್ರಿಯನೇ! ಕುಶಲವೇ? ಎಷ್ಟು ದಿನಗಳಿಂದ ನಿನ್ನ ಬರೋಣವನ್ನು ನಿರೀಕ್ಷಿಸಿಕೊಂಡಿದ್ದೆವು! ಇಂದಿಗೆ ನಮ್ಮಾನಂದಸಾಗರವು ಉಕ್ಕೇರಿತು. ಭಾಗ್ಯದೇವಿಯು ಬಾಗಿಲು ತೆರೆದಳು.

ಅರ್ಜುನ—(ಸಿಟ್ಟಿನಿಂದ) ಇವರೇನು ಹುಚ್ಚರೇ? ಇವರೇಕೆ ಹೀಗೆ ಸಂಬೋಧಿಸುತ್ತಿರುವರು? ಆತನು ಬಭ್ರುವಾಹನ ಮಹಾರಾಜನಂತೆ; ಬಹಳ ಪರಾಕ್ರಮಿಯಂತೆ; ಮಣಿಪುರದ ಅರಸನಂತೆ; ನಾನು ಅವನ ಪಿತನಂತೆ. ಆತನಿಗೂ ಹಸ್ತಿನಾವತಿಯಲ್ಲಿರುವ ನನಗೂ ಇದೆಲ್ಲಿಯ ಸಂಬಂಧ? ಈಕೆ ಮಣಿಪುರದ ಮಹಾರಾಣಿಯಂತೆ. ವೇಶ್ಯೆಯರಂತೆ ಪ್ರಿಯನೆಂದು ಸಂಬೋಧಿಸುತ್ತಿರುವಳು. ಇವರಿಗೆ ಬ್ರಹ್ಮನು ಲಜ್ಜೆಯನ್ನು ಎಳ್ಳಷ್ಟಾದರೂ ಕೊಡಲಿಲ್ಲವೇ? ಛೀ! ಛೀ!

ಬಭ್ರುವಾಹನ—ಪಿತನೇ! ಇದೇಕೆ ನನ್ನ ಮಾತೆಯನ್ನು ಅವಮಾನಪಡಿಸುತ್ತಿರುವೆ? ಆಕೆಯೇನು ತಪ್ಪನ್ನು ಮಾಡಿರುವಳು? ನೀನು ನನಗೆ ಜನ್ಮವಿತ್ತವನೆಂದರಿಯದೆ, ನಿನಗೆ ನೆರವಾಗುವುದನ್ನಿಚ್ಛಿಸದೆ, ನಾನೇ ಯುದ್ಧಸನ್ನದ್ಧನಾಗಿದ್ದೆ. ಆಗ ಅನುನಿತ್ಯವೂ ನಿನ್ನನ್ನು ಧ್ಯಾನಿಸಿಕೊಂಡಿದ್ದ ಈ ನನ್ನ ಮಾತೆಯೇ ನನ್ನನ್ನು ತಡೆದಳು. ಅವಳು ಮಾಡಿದುಪಕಾರಕ್ಕಾಗಿ ಅವಳ ಮೇಲೆ ಕೋಪವನ್ನು ತೋರಿಸುವುದೇ? ಇಂಥಾ ಅಪಮಾನಕರವಾದ ಮಾತುಗಳನ್ನು ಹೊರಿಸುವುದೇ?

ಅರ್ಜುನ—ಇನ್ನೂ ಪಿತನೆನ್ನುತ್ತಿರುವನು. ಎಲವೋ ಹುಡುಗ! ನೀನು ಹುಚ್ಚನಂತೆ ಮಾತಾಡುತ್ತಿರುವೆ. ಮಹಾರಾಜನೆಂಬ ದೊಡ್ಡ ಅಭಿಮಾನದಿಂದ ಮೆರೆಯುತ್ತಿರುವೆ. ಸ್ವಪ್ನದಲ್ಲಿಯೂ ಕಾಣದಿದ್ದವರನ್ನು ಪಿತನೆಂದು ಸಂಬೋಧಿಸುತ್ತಿರುವೆ. ನಿನಗೇನು ಕಣ್ಣುಗಳು ಸರಿಯಿಲ್ಲವೇನು?

ಮೇಘವರ್ಣ—ಏನೋ ಕಣ್ಣುಗುಡ್ಡಗಳಿಲ್ಲವೇನೋ?

ವೃಷಕೇತು—ಕ್ಷಾತ್ರಧರ್ಮವನ್ನು ಪಾಲಿಸುವ ಶಕ್ತಿಯಿಲ್ಲದೆ ರಣರಂಗದ ಪರಿಣಾಮಕ್ಕೆ ಹೆದರಿ ತನ್ನ ಹೇಡಿತನವನ್ನು ಮರೆಮಾಡಿಕೊಳ್ಳಲು ಹುಡುಕಿಕೊಂಡು ಬಂದಿರುವ ತಂತ್ರದ ಮಾತುಗಳಿವು.

ಮೇಘವರ್ಣ—ಹೀಗೆ ಮಾಡುವುದರ ಬದಲು ಒಂದು ಸೀರೆಯನ್ನಾದರೂ ಧರಿಸಿಕೊಂಡು ಬಂದಿದ್ದರೆ ಈ ಸಂಭ್ರಮಕ್ಕೆ ತಕ್ಕ ಭೂಷಣವಾಗುತ್ತಿತ್ತು.

ಬಭ್ರುವಾಹನ—(ಸ್ವಗತ) ಇವರ ಅಹಂಕಾರದ ಮಾತುಗಳು ನನ್ನ

ರಕ್ತವನ್ನು ನನ್ನ ಪ್ರತಿಯೊಂದು ರೋಮದ ತುದಿಗೇರಿಸುವುವು. ಇವರು ಅಪಹಾಸ್ಯ ಮಾಡುತ್ತಿರುವರೋ ಏನೋ? ಇಲ್ಲವೆ ನನ್ನ ಮಾತೆಯು ಹೇಳಿದ ಮಾತುಗಳು ಸುಳ್ಳೇ? ಛಿ! ಛಿ! ನನ್ನ ಮಾತೆಯು ಸುಳ್ಳು ನುಡಿಯಳು. ಪ್ರಾಯಶಃ ಹಾಸ್ಯಮಾಡುತ್ತಿರಬಹುದು. ಇನ್ನೊಮ್ಮೆ ಸಂಬೋಧಿಸಿ ನೋಡುವೆನು. (ಪ್ರಕಾಶವಾಗಿ) ಅಪ್ಪಾ! ನೀವೇಕೆ ನನ್ನನ್ನು ಹೀಗೆ ಹಾಸ್ಯಮಾಡುತ್ತಿರುವಿರಿ? ನನ್ನ ಸಹನಾಗುಣವನ್ನು ಪರೀಕ್ಷಿಸಲು ನೀವೆಲ್ಲರೂ ಮೊದಲೇ ಮಾತಾಡಿಕೊಂಡಿರುವಿರೇನು?

ಅರ್ಜುನ—ನಾನೆಷ್ಟು ಸ್ಪಷ್ಟವಾಗಿ ಹೇಳಿದರೂ ಇವನಿಗೆ ತಿಳಿಯದಾಗಿದೆ. ಇವನಿಗೂ ನನಗೂ ಎಲ್ಲಿಯ ಸಂಬಂಧ? ಎಲೋ! ರಾಜಕುವರಾ! ನಿನಗೂ ನನಗೂ ಎಲ್ಲಿಯ ಬಾಂಧವ್ಯ? ನಿನ್ನ ಮಣಿಪುರಕ್ಕೆ ಕಾಲಿಟ್ಟವರ್‍ಯಾರು? ನಿನ್ನ ತಾಯನ್ನು ಕಂಡವರ್‍ಯಾರು? ನೀನು ನನ್ನ ಪುತ್ರನೆಂಬುದು ಕಾಲ್ಪನಿಕ ಭಾವನೆಯೇ ಸರಿ. ನಿನ್ನ ಹೇಡಿತನವನ್ನು ಮರೆಮಾಚಿಕೊಳ್ಳುವುದಕ್ಕೆ ಬಹಳ ಆಲೋಚಿಸಿ ಬಾಯಿಪಾಠಮಾಡಿಕೊಂಡಿರುವ ಸುಳ್ಳು ಮಾತುಗಳಲ್ಲವೇ ನಿನ್ನೀ ಭಾಷಣ!

ಬಭ್ರುವಾಹನ—ಎಂದರೆ, ನಾನು ನಿನ್ನ ಪುತ್ರನಲ್ಲವೇ?

ಅರ್ಜುನ—ನನಗೇನು ಗೊತ್ತು? ನಿನ್ನನ್ನು ಹಡದ ತಾಯನ್ನು ಕೇಳು.

ಚಿತ್ರಾಂಗದೆ—ಪ್ರಿಯಾ! ಇದೇಕೆ ಹೀಗೆ ಮಾತಾಡುತ್ತಿರುವೆ? ಎಷ್ಟು ಹೊತ್ತಿನ ವರೆಗೆ ಈ ರೀತಿ ಪರಿಹಾಸ್ಯಮಾಡುತ್ತಿರಬೇಕೆಂದು ಬಗೆದಿರುವೆ?

ಅರ್ಜುನ ಪ-ರಿ-ಹಾ-ಸ್ಯವೇ? ನೀನು ಹೇಳುತ್ತಿರುವುದೇ ಪರಿಹಾಸ್ಯವಾಗಿರುವುದು. ನೀನು ರಾಣಿಯಾಗಿ ವೇಶ್ಯೆಯಂತೆ ಮಾತಾಡುತ್ತಿರುವೆ.

ಬಭ್ರುವಾಹನ—ಸಾಕು! ಸಾಕು ನಿನ್ನ ಮಾತುಗಳು! ನನ್ನ ತಾಯನ್ನು ವೇಶ್ಯೆಯೆಂದು ಇನ್ನಾರಾದರೂ ಕರೆದಿದ್ದರೆ ನಾನಾಗಲೇ ಅತನ ರುಂಡದಿಂದ ಚೆಂಡಾಡುತ್ತಿದ್ದೆ. ಈಗ ನಿಜವಾಗಿಯೂ ಹೇಳು. ನಾನು ನಿನ್ನ ಮಗನೋ ಅಲ್ಲವೋ?

ಅರ್ಜುನ—(ಕೋಪೋದ್ರೇಕದಿಂದ) ನನಗೆಲ್ಲಿಂದ ಇಂಥ ಹೇಡಿ ಮಗನಿರುವನು? ಛಿ! ಛಿ! ನಿನ್ನ ಮುಖವನ್ನು ಸುಡು. ದಾರಿಯಲ್ಲಿ ಹೋಗು ವವರನ್ನೆಲ್ಲಾ ಪಿತನೆಂದು ಭಾವಿಸುತ್ತಿರುವೆ. ನನಗೊಬ್ಬನೇ ಮಗನಿದ್ದನು; ಅಭಿಮನ್ಯು. ಆ ಅಭಿಮನ್ಯು-ಸೌಭಾಗ್ಯದ ಮೇರೆ-ಸೌಂದರ್ಯದ ದೇವತೆ! ವೀರತ್ವದ ಶಾಸನ!! ಅವನೇ–ನನ್ನ ವೀರ್ಯದಲ್ಲಿ ಜನಿಸಿದವನೊಬ್ಬನೇ! ಆ ಅಭಿಮನ್ಯು ನನ್ನ ಪುತ್ರ. ಅವನೆಲ್ಲಿ? ಮಗನೆಂದು ಕರೆದುಕೊಳ್ಳುವ ಹೇಡಿ ನೀನೆಲ್ಲಿ? ಛಿ! ಸಾಕು! ಸಾಕು! ನಿನ್ನ ಬಡಿವಾರ. ಇನ್ನು ಮುಂದೆ ನನ್ನ ಮಗನೆಂದು ಲಜ್ಜೆಯಿಲ್ಲದೆ ಹೇಳಬೇಡ. ಈಗ ನೀನು ಯಾವ ಕಾರ್ಯಕ್ಕಾಗಿ ಬಂದಿರುವೆಯೆಂಬುದನ್ನು ವಿಳಂಬಮಾಡದೆ ಹೇಳಿಬಿಡು.

ಬಭ್ರುವಾಹನ—ಕ್ಷತ್ರಿಯ ಕುಲತಿಲಕನಾಗಿ ದಶನಾಮಾಂಕಿತನಾದ ನೀನು ಹೇಳುತ್ತಿರುವುದು ನಿನ್ನ ಬಿರುದಿಗೆ ತಕ್ಕುದಲ್ಲ. ನೀನು ಹೇಳು ತ್ತಿರುವುದೆಲ್ಲವೂ ಸಮರ್ಪಕವೋ ಎಂಬುದನ್ನು ನೀನು ಇನ್ನೊಮ್ಮೆ ಚೆನ್ನಾಗಿ ಆಲೋಚಿಸಿ ನೋಡು. ಯುದ್ಧರಂಗದ ನೆತ್ತರಿನ ಬಣ್ಣವು ನಿನ್ನ ಮಿದು ಳನ್ನು ಕದಲಿಸಿರಬಹುದು. .

ಅರ್ಜುನ—ಏನೆಂದೆ? ಛಿ! ನೀಚ! ಇನ್ನೊಮ್ಮೆ ಆಲೋಚಿಸಿ ನೋಡಬೇಕೆನ್ನುವೆಯಾ? ಇನ್ನೂ ಹೇಡಿಯಂತೆ ಬೇಡುತ್ತಿರುವೆ. ನನ್ನ ಮಗನಾಗಿದ್ದರೆ, ನನ್ನ ವೀರ್ಯದಲ್ಲಿ ಹುಟ್ಟಿದವನಾಗಿದ್ದರೆ ಇಂತಹ ಹೇಡಿ ತನಕ್ಕೆಂದೂ ಎಡೆಕೊಡುತ್ತಿರಲಿಲ್ಲ.

ಬಭ್ರುವಾಹನ—(ಸ್ವಗತ) ಈತನು ಅರ್ಜುನನಲ್ಲವೇ? ಅಥವಾ ನನ್ನ ತಾಯಿಯ ಕುಟಿಲೋಕ್ತಿಯೇ? ಇಲ್ಲ; ಇಲ್ಲ; ನನ್ನ ಜನನಿಯು ಎಂದೆಂದಿಗೂ ಹಾಗೆ ನುಡಿಯಳು. ಈತನಿಗೆ ಹೆಮ್ಮೆಯ ಹುಚ್ಚು ಬಲ ವಾಗಿ ಹಿಡಿದಿದೆ. ಬಹುಶಃ ಕೌರವರನ್ನು ಗೆದ್ದಮಾತ್ರದಿಂದ ಈತನ ಒಣ ಅಹಂಕಾರವು ಅಧಿಕವಾಗಿ ಹುಚ್ಚು ಹಿಡಿಸಿರಬಹುದು. ಇರಲಿ; ಇನ್ನೊಮ್ಮೆ ಸಮಾಧಾನೋಕ್ತಿಯಿಂದ ಮಾತಾಡಿಸುವೆನು. ಎಲೈ ಜನಕನೇ ಹಿಂದೆ ನೀನು ತೀರ್ಥಯಾತ್ರೆಯ ನಿಮಿತ್ತವಾಗಿ ದೇಶಸಂಚಾರ ಹೊರಟು ಮಣಿ ಪುರಕ್ಕೆ ಬಂದು ಚಿತ್ರಾಂಗದೆ ಉಲೂಪಿಯರನ್ನು ವಿವಾಹವಾಡಿಕೊಂಡ ವಿಷಯವನ್ನೆಲ್ಲಾ ಮರೆತು ಬಿಟ್ಟಿರುವೆಯಾ?

ಅರ್ಜುನ—ಎಲೋ! ನೀನು ಹುಟ್ಟುವುದಕ್ಕೆ ಮೊದಲೇ ನಿನಗೆಲ್ಲವೂ ತಿಳಿದಿರುವಂತೆ ಮಾತಾಡುತ್ತಿರುವೆ? ನೀನಿನ್ನೂ ನನ್ನ ಪಿತ್ಥವನ್ನು ಕೆರಳಿಸಬೇಕೆಂದಿರುವೆಯಾ? ಕೈಲಾಗದವನಂತೆ ಬಂದು ನಿಂತು ವಾಗಾಡಂಬರವನ್ನು ತೋರಿಸುತ್ತೀ. ನನ್ನ ವೀರ್ಯದಲ್ಲಿ ಜನಿಸಿದವನು ಯುದ್ಧಕ್ಕೆ ಹೆದರುತಿದ್ದನೇ? ಯಜ್ಞಾಶ್ವವನ್ನು ಕಟ್ಟಿಹಾಕಿಸಿ, ಆಮೇಲೆ ಯುದ್ಧ ಮಾಡದೆ ಅಂಜುಬುರುಕನಂತೆ ನನ್ನ ಮಗನು ಹೀಗೆ ನಿಂತುಕೊಳ್ಳುತ್ತಿದ್ದನೆ? ಛೀ! ಛೀ! ಎಂದಿಗೂ ಇರಲಾರದು. ನೀನ್ಯಾರೋ ಈ ವೇಶ್ಯಾಂಗನೆಯ ಜಠರದಲ್ಲಿ ಯಾವನೋ ಒಬ್ಬ ವಿಟಪುರುಷನಿಗೆ ಜನಿಸಿದವನಂತೆ ತೋರುತ್ತಿರುವಿ. ಇವಳಾದರೋ ಕ್ಷತ್ರಿಯಳೆನ್ನಿಸಿದ್ದರೂ ವೈಶ್ಯನ ಸಂಗಡ ಸಂಭೋಗಮಾಡಿದ ಪ್ರತಿಫಲವೇ ನೀನು—ಹೇಡಿ ಕುದುರೆಯನ್ನು ಕಟ್ಟಿಹಾಕಿ ಆ ಮೇಲೆ ರಣರಂಗದ ನೆತ್ತರಿಗೆ ಬೆದರಿ ಕಪ್ಪವನೊಪ್ಪಿಸಲು ಬಂದ ರಣಹೇಡಿ! ಚತುರಂಗಬಲಕ್ಕಧಿಪತಿಯಾದರೂ ಚಾತುರ್ಯವಿಲ್ಲದ ಮಂದ ಮನುಜ! ಛಿ! ಕ್ಷತ್ರಿಯಕುಲಕ್ಕೆ ಅಪಮಾನವನ್ನು ಹೊರಿಸಿದ ನಿನ್ನ ಮುಖವನ್ನು ಸುಡು. ರಾಜಕುರುಹುವು ಇಲ್ಲದ ನೀನು ನರ್ತಕಿಯ ಮಗನು. ವಿಟನಿಗೆ ಜನಿಸಿದವನು. ಹೀಗೆ ರಾಜರಂತೆ ವೇಷವನ್ನು ಧರಿಸಿ ಮೆರೆವ ನಿನ್ನ ಮೋರೆಯನ್ನು ಸುಡು! ಸುಡು!

ಬಭ್ರುವಾಹನ—(ಸಿಟ್ಟಿನಿಂದ) ಸುಬುದ್ಧಿ! ಈಗಲೇ ಹೊರಡು. ಆ ಯಜ್ಞಾಶ್ವವನ್ನೂ ಈ ಕನಕ ವಸ್ತ್ರಾಭರಣಗಳನ್ನೂ ಪುರಕ್ಕೆ ಮರಳಿಸು. ಈತನ ಹೆಮ್ಮೆಯಮಾತುಗಳನ್ನು ಕೇಳಿ ರಕ್ತವು ಕುದಿಯುತ್ತಿದೆ. ಈ ಮಾತೆಯ ಮಾತನ್ನು ಕೇಳಿ ಇಂಥಾ ಅಪಮಾನಕ್ಕೆ ಗುರಿಯಾದೆನು. ಆಗಲಿ. ಇದರ ಸೇಡನ್ನು ಇಮ್ಮಡಿಯಾಗಿ ತೀರಿಸಿಕೊಳ್ಳದಿರುವೆನೇ? ತಕ್ಕ ಪ್ರತೀಕಾರವನ್ನು ಸಾಧಿಸದಿರುವೆನೇ? ಸುಬುದ್ಧಿ! ನೀನು ಒಡನೆ ಹೋಗಿ ನಮ್ಮ ಮರುತ್ಮಂತನಿಗೆ ಯುದ್ಧ ಉಪಕರಣಗಳನ್ನು ಸಂಗ್ರಹಿಸಿ ಸಿದ್ಧವಾಗಿರುವಂತೆ ಅಜ್ಞೆಯನ್ನಿತ್ತಿರುವೆನೆಂದು ಅರುಹು.

[ಸುಬುದ್ಧಿ ನಮಸ್ಕರಿಸಿ ಹೋಗುವನು.]

ನೀಲಧ್ವಜ—(ಸ್ವಗತ) ಮಹಾದುಃಖಪ್ರಸಂಗವಿದು. ಈ ಅರ್ಜುನನೀಗೇಕೆ ಹುಚ್ಚು ಹಿಡಿದಿದೆಯೋ ತೋರದು. ತನ್ನ ವೀರ್ಯಜಾತನನ್ನು

ತುಂಬಿದ ಸಭೆಯಲ್ಲಿಯೇ ಅವಮಾನಿಸಿದನು. ಇನ್ನು ಪರಿಣಾಮವು ಒಳಿತಾಗದು.

ಬಭ್ರುವಾಹನ—ಅರ್ಜುನಾ! ನಿನ್ನ ಮಾತುಗಳನ್ನೆಲ್ಲಾ ಶಿರಸಾವಹಿಸಿರುವೆನು ನಿನ್ನ ಮೆದುಳು ರಣರಂಗದ ನೆತ್ತರನ್ನು ಬಯಸಿ ಕದಡಿ ಹೋಗಿರುವುದು. ನಿನ್ನ ಸಂಗಡ ಮಾತುಗಳನ್ನಾಡಿದರೆ ಪ್ರಯೋಜನ ಬರಲಾರದು. ನಿನ್ನ ಹೆಮ್ಮೆಗೆ ಧಿಕ್ಕಾರವಿರಲಿ. ಇದೋ ನಿನ್ನ ವೀರ್ಯದಲ್ಲಿ ಜನಿಸಿದವನಾದರೆ ನಾಳೆ ಸಾಯಂಕಾಲದೊಳಗಾಗಿ ನಿನ್ನನ್ನು ಭೂಗತನನ್ನಾಗಿ ಮಾಡುವೆನು. ಇಲ್ಲವಾದರೆ ನೀನು ಹೇಳಿದ ಮಾತುಗಳೆಲ್ಲಾ ನನಗೂ ಮತ್ತು ನನ್ನ ತಾಯಿಗೂ ಅನ್ವಯಿಸಲಿ. ಮಾತೆಯೇ! ಇನ್ನೇಕೆ ನಿಂತಿರಬೇಕು? ನಡೆ, ಹೋಗೋಣ, ಚಿಕ್ಕಮ್ಮಾ! ಹೊರಡು.

ಚಿತ್ರಾಂಗದೆ—ಮಗೂ! ತಡೆ, ತಡೆ. ನಾನೊಮ್ಮೆ ನನ್ನ ಪ್ರಿಯನ ಮನೋರಥವೇನೆಂಬುದನ್ನು ಕೇಳಿ ತಿಳಿದುಕೊಳ್ಳುವೆನು. ಸ್ವಲ್ಪ ಸಾವಕಾಶಮಾಡು.

ಬಭ್ರುವಾಹನ—ಛೀ! ಇನ್ನು ಇಲ್ಲಿ ನಿಲ್ಲುವುದೇ? ಈ ಧೂರ್ತನ ಮುಂದೆ ನಿಲ್ಲಲು ನನ್ನ ಕಾಲುಗಳೆಂದೂ ಎಳಸವು. ರಣರಂಗವನ್ನು ಸೇರಲು ನನ್ನೀ ಟೊಂಕಗಳು ತ್ವರೆಮಾಡುತ್ತಿವೆ. ನಾನಿನ್ನು ನಿಲ್ಲಲಾರೆನು. ನಾಳೆಯೇ ನನ್ನ ಸಂಬಂಧವನ್ನು ಲೋಕಕ್ಕೆಲ್ಲಾ ಪ್ರಕಟಿಸುವೆನು. ನೆತ್ತಿಗೇರಿದ ಕಣ್ಣುಗಳನ್ನು ಅವನ ಹಣೆಯಿಂದ ಕೆಳಗಿಳಿಸುವೆನು. ಎಲೋ ಪಾರ್ಥಾ! ನಾಳೆ ಸೂರ್ಯಾಸ್ತದೊಳಗಾಗಿ ನಿನ್ನ ರುಂಡವು ಮುಂಡವನ್ನು ಬಿಟ್ಟಗಲುವುದೆಂದು ತಿಳಿ. ಈ ಹೊತ್ತು ಬೇಕಾದ ಭೋಗಾದಿಗಳಲ್ಲಿ ರಮಿಸಿ ನಾಳೆ ಬೆಳಗ್ಗೆ ಯುದ್ಧಕ್ಕೆ ಸನ್ನದ್ಧನಾಗು. ತಕ್ಕ ಪ್ರತೀಕಾರವನ್ನು ಮಾಡುವೆನು. ಅನುಭವಿಸಲು ಸಿದ್ಧನಾಗು! (ಹೋಗುವನು)

ಚಿತ್ರಾಂಗದೆ—ಪ್ರಮಾದವಾಯಿತು, ಪ್ರ ಮಾ ದ ವಾ ಯಿ ತು. (ಮೂರ್ಛೆ ಹೋಗುವಳು )

ನೀಲ—ಪ್ರಮಾದವಾಯಿತು. (ಉಲೂಪಿಯುಪಚರಿಸುವಳು. ನೀಲಧ್ವಜ ಕಣ್ಣುಮುಚ್ಚುವನು.)

ಚಿತ್ರಾಂಗದೆ—(ಎಚ್ಚೆತ್ತು ಅಳುತ್ತ) ಕಾರ್ಯವೆಲ್ಲವೂ ಮಿಂಚಿ ಹೋಯಿತೇ? ಹಾ ವಿಧಿಯೇ! ನನ್ನ ಸೌಖ್ಯನಿಧಿಗೆ ಕಲ್ಲನ್ನಿಟ್ಟೆಯಾ?

ಅರ್ಜುನ—ಏನಿನ್ನು! ವಿಧಿಯೂ ಬರಬೇಕೇ? ಅಯ್ಯೋ ವೇಶ್ಯೆಯೇ! (ನಗುತ್ತ) ನಿನ್ನ ಮಗನ ವಾಗಾಡಂಬರದ ಪ್ರತಿಫಲವೇನಾಯಿತು? ಎಲ್ಲವೂ ತಣ್ಣಗಾಯಿತು. ನೀನೂ ಅವನಂತೆ ವಾದಮಾಡಲು ನಿಂತಿರುವೆಯಾ?

ಚಿತ್ರಾಂಗದೆ—ಪ್ರಿಯಾ! ವಾದಮಾಡಬೇಕಾದ ಸಂಗತಿಯೇನಿದೆ? ಬಭ್ರುವಾಹನನು ಅಸತ್ಯವಾದುದನ್ನು ನುಡಿಯುಲಿಲ್ಲವು.

ಅರ್ಜುನ—ಎಲ್ಲವೂ ಅಸಂಗತವೇ; ಅಸತ್ಯವೇ. ನೀನು ಅವನ ತಾಯಂತೆ ವೇಷವನ್ನು ಹಾಕಿಕೊಂಡು ಬಂದು ಈ ನಮ್ಮ ಸಭೆಯಲ್ಲಿ ಲಜ್ಜೆಯಿಲ್ಲದೆ ಸರಿಯಲು ಪ್ರಯತ್ನಿಸುವೆ. ಭಲೇ! ನಿನ್ನ ಈ ವೇಶ್ಯಾ ರಾಜ್ಯಕ್ಕೆ ಧಿಕ್ಕಾರವಿರಲಿ.

ಚಿತ್ರಾಂಗದೆ—ಮಹಾರಾಜನೇ! ಅದೆಲ್ಲಾ ಇರಲಿ. ನೀನು ನನ್ನನ್ನು ಗುರುತಿಸಲಾರೆಯಾ?

ಅರ್ಜುನ—ಗುರುತಿಸದೇನು? ಎಲ್ಲಿಯೋ ಕಂಡಿರಬಹುದು ವೇಶ್ಯೆಯರು ಎಲ್ಲಾ ಸ್ಥಳಗಳಲ್ಲಿಯೂ ಇರುವರು.

ಚಿತ್ರಾಂಗದೆ—(ಸ್ವಗತ) ಶಿವಶಿವಾ! ನನ್ನನ್ನು ವೇಶ್ಯೆಯೆಂದು ಭಾವಿಸುತ್ತಿರುವನು. ಇದಾವ ಕರ್ಮದ ಫಲವೋ? (ಪ್ರಕಾಶ) ಹಿಂದೆ ನೀನು ಭೂಲೋಕ ಸಂಚಾರಕ್ಕಾಗಿ ಹೊರಟದ್ದು ಮರೆತಿರುವೆಯೇನು?

ಅರ್ಜುನ—ಅದನ್ನೇಕೆ ಮರೆಯಲಿ? ಅಹುದು; ಭೂಸಂಚಾರ ಮಾಡಿದುದೇನೋ ನಿಜ; ಅದರ ಪ್ರಸ್ತಾಪವೇಕೆ?

ಚಿತ್ರಾಂಗದೆ—ಆಗ ನೀನು ಮಣಿಪುರಕ್ಕೆ ಬರಲಿಲ್ಲವೇ?

ಅರ್ಜುನ—ಬಂದಿರಬಹುದು.

ಚಿತ್ರಾಂಗದೆ—ಆಗ ನನ್ನನ್ನು ಕಂಡು ಮೋಹಿಸಿ ಗಂಧರ್ವಪದ್ಧತಿ ಮೇರೆಗೆ ವಿವಾಹಮಾಡಿಕೊಳ್ಳಲಿಲ್ಲವೇ?

ಅರ್ಜುನ—ಛೀ! ಎಂಥಾ ಅನರ್ಥವು? ಮಣಿಪುರಕ್ಕೆ ಬಂದರೂ ಸಿಕ್ಕಿದವರನ್ನು ಮೋಹಿಸಿ ವಿವಾಹಮಾಡಿಕೊಳ್ಳಲು ನಾನೇನು ಹುಚ್ಚನೇ? ನೀನೀ ಪ್ರಸಂಗವನ್ನೆತ್ತಬೇಡ ಇಲ್ಲಿಂದೀಗಲೇ ಹೊರಟುಹೋಗು.

ಚಿತ್ರಾಂಗದೆ—ಹೊರಟುಹೋಗಲಿಕ್ಕೇನೋ ಸಿದ್ಧಳಾಗಿರುವೆ. ಆದರೆ ಸ್ವಲ್ಪ ಸಾವಧಾನವಾಗಿ ಕೇಳು. ನನ್ನನ್ನು ಮೋಹಿಸಿ ಲಗ್ನವಾದ

ನಂತರ ಒಂದು ದಿನ ಸಾಯಂಕಾಲ ಆ ಲತಾಮಂಟಪದಲ್ಲಿ ವಿಹರಿಸುತ್ತಿದ್ದಾಗ ಹೇಳಿದ ಮಾತುಗಳಾದರೂ ನೆನಪಿನಲ್ಲಿವೆಯೇ?

ಅರ್ಜುನ—ಮಾತುಗಳೇ? ಏನು ಮಾತುಗಳು?

ಚಿತ್ರಾಂಗದೆ—ಆ ಸುಪುಷ್ಪವನದ ಲತಾಮಂಟಪದ ಬಳಿ ಮಲ್ಲಿಗೆ ಹೂವನ್ನು ಹೆಕ್ಕುತ್ತಿದ್ದಾಗ ಏನು ಹೇಳಿದೆ?

ಅರ್ಜುನ—ಆಹಾ! ಎಷ್ಟು ವಿನೋದವಾಗಿ ವೇಶ್ಯಾವೃತ್ತಿಗನುಸಾರವಾಗಿ ನುಡಿಯುತ್ತಿರುವೆ? ಆಗಲಿ, ಹೊರಡಲಿ ನಿನ್ನ ಯುಕ್ತಿಯ ಮಾತುಗಳು.

ಚಿತ್ರಾಂಗದೆ—ನಿನ್ನನ್ನು ಇಂದ್ರಪ್ರಸ್ಥಪುರಕ್ಕೊಯ್ದು ನನ್ನ ರಾಣಿಯಾಗಿ ಮಾಡಿಕೊಳ್ಳುವೆನು ಎಂದು ವಚನವನ್ನೀಯಲಿಲ್ಲವೇ?

ಅರ್ಜುನ—(ನಗುತ್ತ) ಇಷ್ಟೆಯೇ, ಇನ್ನೇನಾದರೂ ಹೇಳಲಿಕ್ಕಿದೆಯೇ?

ಚಿತ್ರಾಂಗದೆ—ಇನ್ನೂ ಅಪಹಾಸ್ಯಮಾಡುತ್ತಿರುವೆಯಾ?

ಅರ್ಜುನ—ಅಪಹಾಸ್ಯವೇನು? ನೀನು ಹೇಳುವುದಕ್ಕೆ ಪ್ರತಿಯಾಗಿ ಉತ್ತರಕೊಡುತ್ತಿರುವೆನು.

ಚಿತ್ರಾಂಗದೆ—ಹಾಗಾದರೆ ನೀನು ತೀರ್ಥಯಾತ್ರಾರ್ಥವಾಗಿ ಭೂಸಂಚಾರಮಾಡಿದಾಗ ಚಿತ್ರಾಂಗದೆಯೆಂಬ ಹೆಣ್ಣಿನ ಸ್ಪರ್ಶಮಾಡಿದ ಜ್ಞಾಪಕವೇ ಇಲ್ಲವೇ? ಅವಳ ಸಂಗಡ ಒಂದು ತಿಂಗಳು ಭೋಗವಿಲಾಸಾದಿ ಸುಖಗಳನ್ನನುಭವಿಸಿದ್ದು ಮರೆತೇ ಹೋಯಿತೇ?

ಅರ್ಜುನ—ಛಿ! ಛಿ! ಇನ್ನೂ ಅದೇ ಮಾತೇ? ನಾನು ತೀರ್ಥಯಾತ್ರೆ ಮಾಡಿದಾಗ ಸೌಭದ್ರೆಯನ್ನು ಮಾತ್ರ ಕಂಡು ಮೋಹಿಸಿ ಲಗ್ನವಾದೆನು. ಇನ್ನೇನಾದರೂ ಹೇಳಲಿಕ್ಕಿದೆಯೇ?

ಚಿತ್ರಾಂಗದೆ—ಮತ್ತು ನೀನು ನಾಗಲೋಕಕ್ಕೆ ಹೋಗಿ ಉಲೂಪಿಯೆಂಬ ನಾಗಕನ್ನಿಕೆಯನ್ನು ವರಿಸಿಕೊಂಡದ್ದಾದರೂ ನೆನಪಿನಲ್ಲಿದೆಯೇ?

ಅರ್ಜುನ—(ನಗುತ್ತ) ಓಹೋ! ಚಿತ್ರಾಂಗದೆಯ ಕಥೆಯಲ್ಲದೆ ಬೇರೆ ಉಲೂಪಿಯ ಕಥೆಯೊಂದಿದೆಯೇ?

ಚಿತ್ರಾಂಗದೆ—ನೋಡಿದವಳನ್ನಾದರೂ ಗುರುತಿಸಲಾರೆಯಾ? ಇವಳೇ ಉಲೂಪಿಯು—ಆದಿಶೇಷನ ಪುತ್ರಿಯು,

ಅರ್ಜುನ—ಇವಳನ್ನು ನಾನು ಸ್ವಪ್ನದಲ್ಲಿಯೂ ಕಂಡರಿಯಲಾರೆನು. ಅಂದಮೇಲೆ ಇವಳ ಗೊಡವೆಯೇಕೆ?

ಉಲೂಪಿ—ಕಾಂತಾ! ನಿನಗೇನು ಬುದ್ಧಿಭ್ರಮೆಯಾಗಿರುವುದೇ? ಇಷ್ಟರವರೆಗೆ ನಡೆದ ಪ್ರಸಂಗವನ್ನು ಪ್ರತ್ಯಕ್ಷ ನೋಡಿ ಸಿಟ್ಟು ನೆತ್ತಿಗೇರುವಂತಿದೆ. ಅಬಲೆಯಾದರೂ ನಿನ್ನ ನುಡಿಗಳನ್ನು ಕೇಳುವಾಗ ನನಗೆ ರೋಮಾಂಚನವಾಗುತ್ತಿದೆ. ತನ್ನ ವೀರ್ಯದಲ್ಲಿ ಜನಿಸಿದ ಮಗನನ್ನೇ ತೊರೆದ ನಂತರ ನನ್ನನ್ನು ಅಂಗೀಕರಿಸುವುದು ನಿನ್ನ ಸ್ವಭಾವದಲ್ಲಿಲ್ಲವೆಂದು ನನಗೆ ಸ್ಪಷ್ಟವಾಯಿತು. ನಿನ್ನಂಥವರು ಈ ಭೂಲೋಕದಲ್ಲಿ ಅನೇಕರಿರಬಹುದು. ಆದರೆ ಪುನೀತವಾದ ಚಂದ್ರವಂಶದಲ್ಲಿ ಜನಿಸಿ, ಬಹಳ ಯಶಸ್ವಿಯಾಗಿ, ಲೋಕೈಕವೀರನಾಗಿ ನೀನು ಹೀಗೆ ವರ್ತಿಸುವಿಯೆಂದು ನಾನೆಣಿಸಿರಲಿಲ್ಲ. ಅಬಲೆಯರಾದ ಹೆಂಗುಸರನ್ನು ಮೋಹಿಸಿ, ಅವರನ್ನು ವಶಪಡಿಸಿಕೊಂಡು, ಮೋಹದಿಂದ ಅವರನ್ನು ತೊರೆದು ಕುಲಟೆಯರನ್ನು ಜರೆಯುವಂತೆ ಜರೆದು ಹೀಯಾಳಿಸುತ್ತಿರುವ ನಿನ್ನ ಬಾಳುವೆಯು ಸುಡಲಿ. ನಿರ್ಮಲರಾದ ಸ್ತ್ರೀಯರನ್ನು ಮೋಸಗೊಳಿಸಿ ಅವರನ್ನು ಮೋಹ ಜ್ವಾಲೆಯಲ್ಲಿ ಸುಟ್ಟು, ವಿರಹತಾಪದಲ್ಲಿ ಬೇಯಿಸಿ, ಅವರ ಪ್ರಣಯ ರಾಶಿಯನ್ನು ಭಸ್ಮೀಕರಿಸಿದ ನಿನ್ನ ವೀರತ್ವವನ್ನು ಮಣ್ಣಿನಲ್ಲಿ ಮುಚ್ಚಿಡು.

ಅರ್ಜುನ—ಸಾಕು, ಸಾಕು. ತಡೆ. ಈಗಲೇ ಇಲ್ಲಿಂದ ಹೊರಟು ಹೋಗು.

ಉಲೂಪಿ—ಹೊರಟುಹೋಗದೆ ನಾನಿಲ್ಲಿ ನಿಲ್ಲುವೆನೇ? ಇಂಥ ಮೋಸಗಾರನ ಎದುರಿನಲ್ಲಿ ನಾನೆಂದೂ ನಿಲ್ಲಲಾರೆ; ನಿನ್ನ ಕುಟಿಲ ವರ್ತನಕ್ಕೆ ನಿನ್ನ ರುಂಡವನ್ನು ಸಹಸ್ರಹೋಳುಗಳನ್ನಾಗಿ ಮಾಡಿದರೂ ಸಾಲದು. ನಿನಗೆ ಅವಳ ಮೇಲಾದರೂ ಪ್ರೇಮವಿಲ್ಲವೇ? ನಿನ್ನ ಮೋಹದ ಬಲೆಗೆ ಸಿಕ್ಕಿ ನಿನ್ನನ್ನು ಲಗ್ನವಾಗಿ ನೀನು ಅಗಲಿದಂದಿನಿಂದ ನಿನ್ನನ್ನೇ ಧ್ಯಾನಿಸುತ್ತ ಕಾಲಕಳೆಯುತ್ತಿದ್ದ ನಾರೀಮಣಿಯನ್ನು ಉಪೇಕ್ಷಿಸಿ ಹೀಯಾಳಿಸುತ್ತಿರುವೆ. ಅಕೆಗಲ್ಲವೇ ನೀನು ಮಗನೊತ್ತು ಒಂದು ವರ್ಷದೊಳಗಾಗಿ

ಬರುವೆನೆಂದು ವಚನವಿತ್ತು ಇಂದ್ರಪ್ರಸ್ಥಪುರಕ್ಕೆ ಹೋದವನು ಹತ್ತೊಂಭತ್ತು ವರ್ಷಗಳಾದರೂ ಬಾರದೆ ಅವಳ ನೆನಪಿಲ್ಲದೆ ಅವಳನ್ನೇ ಹೀಯಾಳಿಸುತ್ತಿರುವೆ. ಒಂದು ತಿಂಗಳು ಅವಳ ಅಂತಃಪುರದಲ್ಲಿ ಭೋಗವಿಲಾಸಾದಿಗಳಿಂದ ತೃಪ್ತಿಹೊಂದಿ ಅದೆಲ್ಲವನ್ನೂ ಮರೆತ ಕೃತಘ್ನನಲ್ಲವೇ ನೀನು! ನಿನಗೆ ಧಿಕ್ಕಾರವಿರಲಿ. ನನ್ನ ಗೊಡವೆಯೇ ನಿನಗೆ ಬೇಡ. ನಿನ್ನ ಮೆದುಳಿಗೇರಿದ ಅಹಂಕಾರವು ಶಮನವಾದ ಮೇಲೆ ನೀನೇ ನನ್ನನ್ನು ವಿಚಾರಿಸುತ್ತ ಬರುವಿ.

ಅರ್ಜುನ—ಸಾಕು, ಸಾಕು ಹೆಣ್ಣುಮೂಳೆ. ನಿಮ್ಮನ್ನೆಲ್ಲಾ ಇಲ್ಲಿಗೆ ಬರಲು ಬಿಟ್ಟದ್ದೇ ನನ್ನ ತಪ್ಪು. ಈಗಲೇ ಇಲ್ಲಿಂದ ಹೊರಟುಹೋಗು.

ಉಲೂಪಿ—ಹೋಗದಿರುವೆನೇ. ನಿನ್ನ ಸಮ್ಮುಖದಲ್ಲಿ ಅರೆಗಳಿಗೆ ನಿಲ್ಲಲು ನನಗೆ ಮನಸ್ಸಿರದು. ಅಕ್ಕಾ! ಹೊರಡು; ನಾವು ಹೋಗೋಣ. ಮುಂದೆ ವಿಧಿಯು ಲಿಖಿತದಂತಾಗಲಿ.

ಚಿತ್ರಾಂಗದೆ—ಉಲೂಪಿ! ತಡೆ. ಈ ಸಭಿಕರಾದರೂ ನನ್ನ ಪ್ರಾರ್ಥನೆಯನ್ನಂಗೀಕರಿಸಿ ಅವನಿಗೆ ಸ್ವಲ್ಪ ಬುದ್ಧಿ ಹೇಳುವರೋ ನೋಡೋಣ.

ಉಲೂಪಿ—ನಿನಗೇನು ಹುಚ್ಚೇ! ಕಡಿವಾಣವೇ ತುಂಡಾಗಿ ಹೋದ ಮೇಲೆ ಕುದುರೆಯ ವೇಗವನ್ನು ತಡೆಯಲು ಸಾಧ್ಯವೇ?

ಚಿತ್ರಾಂಗದೆ—ತಂಗೀ! ತಡೆ. ಅದರೂ ಪ್ರಯತ್ನಿಸಿ ನೋಡೋಣ. (ಸಭಿಕರನ್ನು ಕಂಡು) ಇದೀಗ ಕೊನೆಯ ಮಾತು! ಯಾರಾದರೂ ಹೇಳಲಿ! ನಮ್ಮ ಮಗನನ್ನು ಕಂಡಾಗ ಈ ಅರ್ಜುನನ ಪ್ರತಿರೂಪವೆಂದು ಭಾಸವಾಗುವುದಿಲ್ಲವೆ? ಅವನ ದೇಹಾಕೃತಿ, ಅವನ ವರ್ಚಸ್ಸು, ಅವನ ಮುಖ, ಅವನ ತೇಜಸ್ಸು ಇವೇ ಅರ್ಜುನನ ಪ್ರತಿಬಿಂಬಗಳಾಗಿ ಮೆರೆಯುವುದಿಲ್ಲವೇ? ಅವನ ನಡಿಗೆ, ಅವನ ಆಚಾರ, ಈ ಅರ್ಜುನನ ನಡಿಗೆ ಆಚಾರಗಳಂತಿಲ್ಲವೇ? ಎಂದ ಮೇಲೆ ಬಭ್ರುವಾಹನನು ಅರ್ಜುನನ ಪುತ್ರನೆಂಬುದು ಸ್ಪಷ್ಟವಲ್ಲವೇ?

ವೃಷಕೇತು—ಇದ್ದರೂ ಇರಬಹುದು. ನಮಗೇನೋ ಸಂಬಂಧವಿರುವಂತೆ ತೋರುತ್ತಿದೆ.

ನೀಲಧ್ವಜ—ನಾನು ಮೊದಲೇ ಹೇಳಲಿಲ್ಲವೇ? ವೃಷಕೇತು!

ಅರ್ಜುನನಿಗೆ ನಿನ್ನಲ್ಲಿ ತುಂಬಾ ಅಭಿಮಾನವಿದೆ. ನೀನೇ ಅರ್ಜುನನಿಗೆ ಹೇಳು.

ವೃಷಕೇತು—ಇಲ್ಲ. ಇಲ್ಲ. ಹಿರಿಯನಾದ ನೀನೇ ಇನ್ನೊಮ್ಮೆ ಹೇಳುವುದುಚಿತವು.

ನೀಲಧ್ವಜ—ಪಾರ್ಥ! ಬಭ್ರುವಾಹನನು ನಿನ್ನ ಮಗನೆಂದು ಮೊದಲೆ ಹೇಳಿರುವೆನು. ಈ ಸ್ತ್ರೀಯರು ನುಡಿಯುವುದರಲ್ಲಿ ಅಸತ್ಯವು ಎಳ್ಳಷ್ಟೂ ಇರಲಾರದೆಂದು ನಂಬುತ್ತೇನೆ. ಇನ್ನಾದರೂ ಇವರನ್ನು ಉಪೇಕ್ಷಿಸಬೇಡ. ಆ ಬಭ್ರುವಾಹನನು ನಿನ್ನನ್ನು ಪ್ರತಿ ಅಣುವಿನಲ್ಲಿಯೂ ಹೋಲುತ್ತಿರುವನು.

ಅರ್ಜುನ—ಸಾಕು, ಸಾಕು. ನಿನ್ನ ಬುದ್ಧಿವಾದವನ್ನು ಕೇಳುವ ಸಂದರ್ಭವು ಬಂದಿರುವುದಿಲ್ಲ.

ನೀಲಧ್ವಜ—ಅರ್ಜುನಾ! ಮುಂದಾಲೋಚಿಸಿ ಮಾತಾಡು. ಹಿಂದಿನ ನಿನ್ನ ಚರಿತ್ರೆಯೆಲ್ಲವನ್ನೂ ಇನ್ನೊಮ್ಮೆ ಚೆನ್ನಾಗಿ ಆಲೋಚಿಸಿ ನೋಡು. ವರ್ಷಗಳು ಕಳೆಯುತ್ತ ಹೋದಂತೆ ತೀಕ್ಷ್ಣವಾದ ಬುದ್ಧಿಯು ಮಂದವಾಗಿ ಶುಭ್ರವಾದ ನೆನಪು ಹುರಿಗಟ್ಟುವುದು. ಅಲ್ಲದೆ ಯಾವತ್ತೂ ನೀನು ಯುದ್ಧರಂಗದಲ್ಲಿಯೇ ಕಾಲಕಳೆಯುತ್ತಿದ್ದೆಯಾದುದರಿಂದ ನಿನ್ನ ಸ್ನಾಯುಗಳಿಗೆ ಮಾತ್ರ ಕೆಲಸ ದೊರಕಿ ನಿನ್ನ ಮಿದುಳು ಜಡವಾಗಿರಬಹುದು. ಆದುದರಿಂದ ಇನ್ನೊಮ್ಮೆ ಚೆನ್ನಾಗಿ ಪರ್ಯಾಲೋಚಿಸಬೇಕಾಗಿ ನನ್ನ ಪ್ರಾರ್ಥನೆ.

ವೃಷಕೇತು—ಜೀಯಾ! ನನಗೇನೋ ಬಭ್ರುವಾಹನನು ಬಂಧುವಿನಂತೆ ತೋರುತ್ತಿರುವನು.

ಮೇಘವರ್ಣ—ನನಗೂ ಹಾಗೆಯೇ ತೋರುತ್ತಿದೆ. ಬಹುಶಃ ಬಹಳ ಹತ್ತಿರದ ಬಾಂಧವ್ಯವಿರಬಹುದು.

ಅರ್ಜುನ—ಮಕ್ಕಳಿರಾ! ನೀವಿನ್ನೂ ಚಿಕ್ಕವರು ನೀವೇನು ಬಲ್ಲಿರಿ? ಈ ಹೆಂಗುಸರ ಮಾತಿಗೆ ಮರುಳಾಗಬೇಡಿರಿ. ಎಲೌ ವೇಶ್ಯೆಯರೆ! ಇನ್ನು ವಿಳಂಬಮಾಡದೆ ಇಲ್ಲಿಂದ ಹೊರಡಿರಿ.

ಚಿತ್ರಾಂಗದೆ—ಪಾರ್ಥಾ; ಇದು ನಿನಗೆ ಶ್ರೇಯೋದಾಯಕವಲ್ಲ.

ಹಿಂದಕ್ಕೆ ರಾಮನು ಸೀತಾದೇವಿಯನ್ನು ಕಾಡಿಗಟ್ಟಿ ಲವಕುಶರಿಂದ ಸೋತು ಪಶ್ಚಾತ್ತಾಪಪಟ್ಟಂತಾಗಬಹುದು. ಎಲ್ಲವನ್ನೂ ಇನ್ನೊಮ್ಮೆ ಆಲೋಚಿಸಿ ನೋಡು.

ಅರ್ಜುನ—ಎಲ್ಲವನ್ನೂ ಆಲೋಚಿಸಿ ನೋಡಿರುವೆನು. ಹೊರಡುತ್ತೀರೋ ಇಲ್ಲವೋ? ದ್ವಾರಪಾಲಕರಿರಾ!

ಉಲೂಪಿ—ಇದು ಶಕುಂತಲೆಯ ಕಥೆಯಂತಿದೆ. ಇರಲಿ, ನಾಳೆಯೆಲ್ಲವೂ ಗೊತ್ತಾಗುವುದಲ್ಲವೇ? ಬಭ್ರುವಾಹನನು ಸಾಮಾನ್ಯನಲ್ಲ. ಚಿತ್ರಾಂಗದೆ, ನಡೆ, ಹೋಗೋಣ. ಇಂಥಾ ಮೋಸಗಾರರ ಬಲೆಯಲ್ಲಿ ಬೀಳುವಂಥ ನಾರಿಯರು ಶುದ್ಧ ಮೂರ್ಖರಲ್ಲವೇ!

[ಚಿತ್ರಾಂಗದೆ ಉಲೂಪಿಯರು ಹೋಗುವರು.]

---

## ದೃಶ್ಯ ೮

### ಅಂತಃಪುರದಲ್ಲಿ

[ಚಿತ್ರಾಂಗದೆಯು ದುಃಖಿಸುತ್ತಿರುವಳು.]

ಚಿತ್ರಾಂಗದೆ—ಈ ಯುದ್ಧದ ಪರಿಣಾಮವೆಂತಹುದೋ ತಿಳಿಯೆ. ಇಂದು ಯುದ್ಧದಲ್ಲಿ ನನ್ನ ಕಣ್ಣುಗಳಲ್ಲೊಂದು ನಾಶವಾಗುವುದು ನಿಶ್ಚಯವು. ಅರ್ಜುನನು ಅಪ್ರತಿಮ ವೀರನು. ಬಭ್ರುವಾಹನನೂ ಸಾಮಾನ್ಯನಲ್ಲ. ತನ್ನ ಪ್ರಾಣಹೋಗುವ ವರೆಗೆ ಯುದ್ಧದಲ್ಲಿ ಹಿಮ್ಮೆಟ್ಟತಕ್ಕವನಲ್ಲ. ಇವರಿಬ್ಬರಲ್ಲಿ ಯಾರಾದರೊಬ್ಬರು ಮಡಿಯದಿರರು. ಆದರೀ ದುರ್ಘಟನೆಯನ್ನು ಕಣ್ಣಾರೆ ನೋಡಿ ಹೇಗೆ ಸಹಿಸಿಕೊಂಡಿರಲಿ? ಅರ್ಜುನನೋ ನನ್ನ ಪ್ರಾಣಪ್ರಿಯನು. ಬಭ್ರುವಾಹನನು ಪ್ರಾಣಾಧಿಕನು. ಆತನು ನನ್ನ ಕೈಹಿಡಿದ ಪತಿ, ಈತನು ನನ್ನುದರಲ್ಲಿ ಜನಿಸಿದ ಪುತ್ರರತ್ನ. ವಿಧಿಯೇ! ಏನನರ್ಥ ಮಾಡಿದೆ! ನನ್ನನ್ನೇಕೆ ಇನ್ನೂ ಜೀವದಿಂದುಳಿಸಿರುವೆ! (ಎದ್ದು ನಿಲ್ಲುವಳು, ಮಂಗಲಸೂತ್ರವು ಕಳಚಿ ಬೀಳುವುದು.) ಹಾಯ್! ಇದೇನು, ನನ್ನ ಮಂಗಳ ಸೂತ್ರವೇ ಕಳಚಿ ಬಿತ್ತಲ್ಲಾ! (ಅಳುವಳು, ಉಲೂಪಿಯ ಪ್ರವೇಶ.)

ಉಲೂಪಿ– ಅಕ್ಕಾ! ಯಾಕೆ ಅಳುತ್ತಿರುವೆ? ನಮ್ಮ ಹಣೆಯಲ್ಲಿ ಬರೆದುದನ್ನು ಬ್ರಹ್ಮನಿಂದಲೂ ಅಳಿಸಲು ಅಸಾಧ್ಯವು. ಬಂದುದನ್ನು ಅನುಭವಿಸಿಯೇ ತೀರಬೇಕು.

ಚಿತ್ರಾ—ಅಹುದು ಉಲೂಪಿ! ಇಕೋ, ಈ ಮಂಗಲಸೂತ್ರವೇ ಈಗ ಕಳಚಿಬಿತ್ತಲ್ಲ! ಇನ್ನು ವೈಧವ್ಯವು ನಿಶ್ಚಯವು. ಈರೇಳು ವರ್ಷಗಳಿಂದ ನಾನು ಕಟ್ಟುತ್ತಿದ್ದ ಸುಖದಾಗಾರದ ಅಸ್ತಿಭಾರವೇ ಇಂದು ಕುಸಿದಂತೆ ತೋರುವುದು. ನಾನಿನ್ನು ಜೀವವನ್ನು ಯಾಕೆ ಇಟ್ಟುಕೊಳ್ಳಲಿ!

[ಬಭ್ರುವಾಹನ ಯುದ್ಧಸನ್ನದ್ಧನಾಗಿ ಪ್ರವೇಶಿಸುವನು.]

ಬಭ್ರು—(ನಮಸ್ಕರಿಸಿ) ಅಮ್ಮಾ! ಯುದ್ಧಕ್ಕೆಲ್ಲವೂ ಸಿದ್ಧವಾಗಿರುವುದು. ಇನ್ನು ನಿಮ್ಮೀರ್ವರ ಆಶೀರ್ವಾದವನ್ನು ಪಡೆದು ರಣರಂಗಕ್ಕೆ ಹೊರಡಲುದ್ಯುಕ್ತನಾಗುವೆನು.

ಚಿತ್ರಾ—ಮಗುವೇ! ಆಯುಷ್ಮಂತನಾಗು.

ಉಲೂಪಿ—ಮಗುವೇ! ದೀರ್ಘಾಯುವಾಗು. ದೇವರು ನಿನಗೆ ಮಂಗಳವನ್ನೀಯಲಿ. ಆದರೆ ರಣರಂಗದಿಂದ ಮಾತ್ರ ಹೇಡಿಯಂತೆ ಹಿಂದಿರುಗಬೇಡ.

ಬಭ್ರು—ಅಮ್ಮಾ, ಚೈತನ್ಯವು ನನ್ನೀದೇಹದ ಅಣುಗಳಲ್ಲಿ ತುಂಬಿರುವ ವರೆಗೆ ನಾನೆಂದೂ ರಣರಂಗದಿಂದ ಹಿಂದಿರುಗೆನು. ನಿನ್ನೆ ಅರ್ಜುನನು ಹೇಳಿದ ಮಾತುಗಳಿಂದ ನನ್ನ ಹೃದಯವು ಒಡೆದು ರಕ್ತವು ಉಕ್ಕಿ ಶರೀರವನ್ನೆಲ್ಲಾ ವ್ಯಾಪಿಸಿ, ಆತನನ್ನು ನೆಲಕ್ಕೆ ಕೆಡಹುವಂತೆ ಪ್ರೇರೇಪಿಸುತ್ತಿರುವುದು. ನನ್ನೀ ಶರೀರದ ಪ್ರತಿಯೊಂದು ಜೀವಾಣುವು ನಮ್ಮ ಚೈತನ್ಯದಿಂದ ತುಂಬಿ ಆತನ ಹೆಮ್ಮೆಯ ಮಾತುಗಳಿಗೆ ತಕ್ಕ ಪ್ರತೀಕಾರವನ್ನೀಯಬೇಕೆಂದು ಕುಣಿದಾಡುತ್ತಿದೆ. ರಣರಂಗದಿಂದ ಹಿಂದಿರುಗುವುದೇ? ಈ ಬಭ್ರುವಾಹನನು ಈ ಜನ್ಮದಲ್ಲೆಂದೂ ಹಾಗೆ ಮಾಡಲಾರನು.

ಚಿತ್ರಾ—ಹಾ, ವಿಧಿಯೇ! ನನ್ನನ್ನೇಕೆ ಈ ನರಕಕೂಪಕ್ಕೆ ತಳ್ಳಿರುವೆ? ತನ್ನ ಜನ್ಮದಾತನೊಡನೆ ಯುದ್ಧ ಮಾಡಲು ಹವಣಿಸುವ ಮಗನನ್ನು ನನ್ನ ಬಸಿರಿನಲ್ಲಿ ಯಾಕೆ ತಂದುಹಾಕಿದೆ? ದೇವಾ! ಜಗದೀಶಾ! ನಾನೇನು ಪಾಪ ಮಾಡಿದ್ದೆ? ನನ್ನ ಮಗನೇ ನನ್ನ ಪ್ರಾಣಪ್ರಿಯನ ಸಂಗಡ ಯುದ್ಧ

ಮಾಡುವ ಘೋರಪ್ರಸಂಗವನ್ನು ಒದಗಿಸಿದೆಯಾ? ಹಾ! ನನ್ನ ಪಾಪಿ ಜೀವವೇ! ನೀನೇಕೀ ಶರೀರದಲ್ಲಿರುವೆ? ಈ ದೇಹವನ್ನು ಬಿಟ್ಟು ತೊಲಗಲು ನಿನಗಿನ್ನೂ ಸಮಯವು ಬಂದಿಲ್ಲವೇ?

ಬಭ್ರುವಾಹನ—ಅಮ್ಮಾ! ನೀನೇಕೆ ಹೀಗೆ ಹಂಬಲಿಸುತ್ತಿರುವೆ? ನನ್ನನೀ ರೀತಿ ದೂಷಿಸಲು ನಾನೇನು ಅಪರಾಧಮಾಡಿರುವೆನು? ಎಲ್ಲವೂ ವಿಧಿನಿಯಮವು. ಅರ್ಜುನನು ನನ್ನನ್ನು ತನ್ನ ಪುತ್ರನೆಂದೂ, ನಿಮ್ಮನ್ನು ಸತಿಯರೆಂದೂ ತಿಳಿಯದೆ ಉಪೇಕ್ಷಿಸಿದನು. ಇವೆಲ್ಲವೂ ಕರ್ಮದ ಮಾಟದಿಂದುತ್ಪನ್ನವಾದ ಆಟ. ಇನ್ನ್ಯಾಕೆ ಹಂಬಲಿಕೆ? ನಾನಾದರೋ ನನ್ನ ಧರ್ಮವನ್ನು ಕಾಪಾಡಬೇಕಾಗಿದೆ. ತನ್ನ ಧರ್ಮವನ್ನು ಎಲ್ಲಾ ಕಾಲದಲ್ಲಿಯೂ ತನ್ನ ಬಂಧುಮಿತ್ರರಿಗೆ ಪ್ರತಿಬಂಧಕವಾದರೂ ಮನಗುಂದದೆ ಕಾಯಬೇಕೆಂದು ವೇದವಚನಗಳು ನಿಯೋಗಿಸುತ್ತಿರುವುವು. ನೀನು ಚಿಂತಾಮಗ್ನಳಾಗದೆ ದೇವರ ನಾಮಸ್ಮರಣೆಮಾಡುತ್ತಾ ಕಾಲಕಳೆಯುತ್ತಿರು. ನಾನಾದರೋ ನನ್ನ ಕರ್ಮೋತ್ಪನ್ನವಾದ ಧರ್ಮವನ್ನು ಪ್ರತಿಪಾಲಿಸಲು ಹೋಗುವೆನು. ಅಮ್ಮಾ! ಇನ್ನೊಮ್ಮೆ ಆಶೀರ್ವದಿಸು. (ನಮಸ್ಕರಿಸುವನು). ಚಿಕ್ಕಮ್ಮಾ! ನೀನೂ ಇನ್ನೊಪ್ಪೆ ಹರಸಲಾರೆಯಾ? ನಿಮ್ಮೆಲ್ಲರ ಆಶೀರ್ವಾದವು ನನಗೆ ವಜ್ರಕವಚದಂತಿದ್ದು, ಕಷ್ಟಕಾಲದಲ್ಲಿಯೂ ಸಹಾಯಕವಾಗುವುದು. (ಚಿತ್ರಾಂಗದೆ ಅಳುತ್ತಿರುವಳು)

ಉಲೂಪಿ—ಅಪ್ಪಾ! ನನ್ನ ಕೈಯಲ್ಲೇನಿದೆ? ಎಲ್ಲವೂ ಪರಮಾತ್ಮನ ಮಾಯಾಜಾಲದಿಂದಲೇ ನಡೆಯಬೇಕಾಗಿದೆ. ಪರಮಾತ್ಮನೇ ನಿನಗೆ ಮಂಗಳವನ್ನೀಯಲಿ. ಕುಳ್ಳಿರು. ಅಕ್ಷತೆಯನ್ನು ತರುವೆನು. (ಅಕ್ಷತೆ ಮುಂತಾದುವುಗಳನ್ನು ತರುವಳು. ಚಿತ್ರಾಂಗದೆಯು ಮತ್ತೂ ಅಳುತ್ತಿರುವಳು.) ಅಕ್ಕಾ, ನಿನ್ನ ಮುದ್ದು ಕುವರನನ್ನು ಹರಸುವುದಿಲ್ಲವೇ? ಇಗೋ ಅಕ್ಷತೆ, ಮಂಗಳಾರತಿ. (ಇಬ್ಬರೂ ಅಕ್ಷತೆ ಹಚ್ಚುವರು.)

ಬಭ್ರು— ಅಮ್ಮಾ, ನೀನ್ಯಾಕೆ ಮಾತಾಡುವುದಿಲ್ಲ.

ಚಿತ್ರಾ—ಮಗೂ-ನಿನಗೆ ಮಂಗಳವಾಗಲಿ. ಆದರೆ ಅರ್ಜುನನಿಗೆ ಬೇಕೆಂದು ಪ್ರಾಣಹಿಂಸೆಯನ್ನು ಮಾಡಬೇಡ. ನಿನ್ನ ಶಪಥವನ್ನು ಗೆದ್ದು ಅವನನ್ನು ಜೀವಸಹಿತ ಕರಕೊಂಡು ಬಾ. ಇಲ್ಲವಾದರೆ ನನ್ನ ಮಂಗಳ

ಸೂತ್ರಕ್ಕೆ ನೀನೇ ಕುಠಾರನಾಗುವೆ. ಯುದ್ಧದ ನಿಯಮಗಳನ್ನನುಸರಿಸಿ ಮುಂದೆ ಕದನವನ್ನು ಮಾಡು. ಪ್ರಾಣದಾನ ಬೇಡಿದವರಿಗೆ ಪ್ರಾಣಹಿಂಸೆ ಮಾಡಬೇಡ. ನಿರಾಯುಧರನ್ನು ಹತಮಾಡಬೇಡ. ಸೋತು ಓಡುವವರನ್ನು ಕೊಲ್ಲಬೇಡ. ಗಾಯಪಟ್ಟವರು ಶತ್ರುಗಳಾದರೂ ಸುಶ್ರೂಷೆ ಮಾಡು.

ಬಭ್ರು—ಅಮ್ಮಾ! ನಿನ್ನಪ್ಪಣೆಯನ್ನು ಶಿರಸಾವಹಿಸಿರುವೆನು. ನಾನಿನ್ನು ಹೊರಡುವೆನು.

ಚಿತ್ರಾಂಗದೆ—ಮಗುವೇ ಹೊರಡು! ಹೊರಡು! (ಅಳುವಳು. ಬಭ್ರು ಹೋಗುವನು.) ತಪ್ಪು ನಿನ್ನದಲ್ಲ, ನನ್ನದು. ನಿನ್ನ ಹೆತ್ತ ತಾಯಿಯದು. ಇದು ನನ್ನ ಕರ್ಮಫಲ. ಹೋಗು ಮಂಗಳವಾಗಲಿ.

---

## ದೃಶ್ಯ ೬

### ಯುದ್ಧರಂಗ, ಅರ್ಜುನನ ಶಿಬಿರ.

[ಅರ್ಜುನನು ಯುದ್ಧಾತುರನಾಗಿ ಕುಳಿತಿರುವನು; ವೃಷಕೇತು ಪಕ್ಕದಲ್ಲಿ ಕವಚಗಳನ್ನು ಧರಿಸಿ ನಿಂತಿರುವನು.]

ಅರ್ಜುನ—ಅದೇನಾ ಕೋಲಾಹಲ! ಶತ್ರುಪಕ್ಷದ ಭೇರಿಯು ಮೊಳಗುತ್ತಿರುವುದು! ನಮ್ಮ ಅನುಸಾಲ್ವ ನೀಲಧ್ವಜ ಪ್ರದ್ಯುಮ್ನರು ಅಬಲೆಯರಾದರೇ!

ಚಾರಕ—(ಓಡಿಬಂದು) ಜೀಯಾ! ಸರ್ವನಾಶವಾಯಿತು.

ಅರ್ಜುನ....ಏನು! ಏನು? ಬೇಗನೆ ಹೇಳು.

ಚಾರಕ—ನನಗೆ ಬಾಯ್ದೆರೆಯಲು ಶಕ್ತಿಯೇ ಬಾರದು. ಓಡಿಬಂದು ಕಕ್ಕುಸದಿಂದ ಉಸಿರುಗಟ್ಟಿರುವುದು.

ಅರ್ಜುನ—ಬೊಗಳೋ, ಬೇಗನೇ ಬೊಗಳು. ನಿನ್ನ ಅಧಿಕ ಪ್ರಸಂಗ ಯಾರಿಗೆ ಬೇಕು?

ಚಾರಕ—ನಾನೇನು ಹೇಳಲಿ? ಅನುಸಾಲ್ವ ನೀಲಧ್ವಜರು ತಮ್ಮ ರಥದ ಸಾರಥಿಯನ್ನು ಕಳೆದುಕೊಂಡು, ಖಡ್ಗ ಬಿಲ್ಲುಗಳನ್ನು ಶತ್ರುವಿರ

ಮಾತಿ, ಮೂರ್ಛಾಕ್ರಾಂತರಾಗಿ ರಣರಂಗದಲ್ಲಿ ಬಿದ್ದಿರುವರು. ಪ್ರದ್ಯುಮ್ನ ಅನಿರುದ್ಧರು ಬಭ್ರುವಾಹನನ ಸೆರೆಯಲ್ಲಿರುವರು. ನಮ್ಮ ಸೈನ್ಯವೆಲ್ಲವೂ ನುಚ್ಚುನೂರಾಗಿ ಕೊಚ್ಚಿಹೋಯಿತು.

ಅರ್ಜುನ—ಏನು ಹೇಳಿದೆ? ನಮ್ಮ ಸೈನ್ಯವು ಕೊಚ್ಚಿಹೋಯಿತೇ? ಹೋಗಲಿ; ಎಲ್ಲರೂ ಯಮಲೋಕಕ್ಕೆ ಹೋಗಲಿ. ಬಿಲ್ಲಾಳ ಬಿಲ್ಲೇ ನಾನಾಗಿರಲು ಜಯಲಕ್ಷ್ಮಿಯು ಆ ವೈಶ್ಯನಿಗೊಲಿಯುವಳೇ? ಇಲ್ಲ; ಇಲ್ಲ. ನನ್ನ ಗಾಂಡೀವದ ಝೇಂಕಾರಕ್ಕೆ ಇಡೀ ಲೋಕವೇ ಬೆದರುವುದು. ಇಂಥ ಅಳ್ಳೆದೆಯ ಪೊಳ್ಳು ಬಭ್ರುವಾಹನನು ನನ್ನೆದುರು ನಿಲ್ಲಲಾಪನೇ? ಮೂರು ಲೋಕದ ಗಂಡನೆಂಬ ಬಿರುದು ಬರಿದಾಗುವುದೇ? ಛೆ! ಛೆ! ಎಂದೂ ಆಗಲಾರದು. ನಾನೇ ಯುದ್ಧಕ್ಕೆ ಹೊರಡುವೆನು. ಮಗೂ! ವೃಷಕೇತು, ನೀನು ಮೇಘವರ್ಣನ ಸಂಗಡ ಹಸ್ತಿನಾವತಿಗೆ ಹೋಗಿ ಇಷ್ಟರವರೆಗೆ ನಡೆದ ಯುದ್ಧದ ವಿಚಾರವನ್ನು ಧರ್ಮರಾಯನಿಗೂ ಕೃಷ್ಣನಿಗೂ ತಿಳಿಸು. ನಾನು ಬಭ್ರುವಾಹನನ ಸೊಕ್ಕನ್ನು ಮುರಿಯಲು ಹೊರಡುವೆನು.

ವೃಷಕೇತು—ಕಕ್ಕಾ! ಅದೆಂದಿಗೂ ಸಾಗದು. ಯುದ್ಧಮಾಡಲು ನೀನಿಷ್ಟರ ತನಕ ಸಂದರ್ಭವನ್ನೇ ದೊರಕಿಸಿಕೊಡಲಿಲ್ಲ. ಎಲ್ಲಾ ಕಾಳಗಗಳಲ್ಲಿಯೂ ನೀನೇ ಮುಂದೆ ನಿಂತು, ಕಾರ್ಯವನ್ನೇ ಪ್ರದರ್ಶಿಸಿದೆ; ನನ್ನ ತಂದೆಯ ಕಾರ್ಯವನ್ನು ಪ್ರಕಟಿಸಲು ತಕ್ಕ ಸಮಯ ಒದಗಲಿಲ್ಲವು. ನನ್ನನ್ನು ಆಶೀರ್ವದಿಸು. ನಾನೇ ಹೋಗಿ ಬಭ್ರುವಾಹನನ ಗರ್ವವನ್ನು ಭಂಗಿಸುವೆನು.

ಅರ್ಜುನ—ಮಗೂ! ನೀನಿನ್ನೂ ಎಳೆಯವನು. ಯುದ್ಧರಂಗದ ಭೀಕರತೆಯು ನಿನಗರಿಯದು. ಕೋಮಲಬಾಲನಾದ ನಿನಗೆ ಆಟಪಾಠಗಳು ಒಪ್ಪುವುವಲ್ಲದೆ, ಕೆಚ್ಚೆದೆಯವರಿಗೂ ಒಂದೊಮ್ಮೆಗೆ ಅಳುಕನ್ನುಂಟುಮಾಡುವ ರಣಭೂಮಿಯು ಸಲ್ಲದು. ನಿನ್ನ ಪುಟ್ಟ ಕೈಗಳ ಮಾರ್ದವವು ಬಿರುಬಿಲ್ಲಿನ ಪ್ರಭುತ್ವವನ್ನು ವಹಿಸಲಯೋಗ್ಯವು. ಆದ್ದರಿಂದ, ಮಗೂ! ನೀನು ಹಸ್ತಿನಾವತಿಗೆ ತೆರಳು.

ವೃಷಕೇತು—ಅಪ್ಪಾ! ಬಭ್ರುವಾಹನನೂ ನಾನೂ ಸಮಾನಸ್ಕಂಧರು. ಆದ್ದರಿಂದ ಅವನ ಸಂಗಡ ಯುದ್ಧಮಾಡಲು, ನಾನೇ

ಯೋಗ್ಯನು. ಗುಬ್ಬಿಯು ಮೇಲೆ ಬ್ರಹ್ಮಾಸ್ತ್ರವೇಕೆ? ಪೋರನಾದ ಆ ಬಭ್ರು ವಾಹನನ ಮೇಲೆ ನೀನು ಕೈಯೆತ್ತಬೇಕೇ?ನನಗೀ ಸಂದರ್ಭವನ್ನು ಕೊಡು.

ಅರ್ಜುನ—ಮಗೂ! ನಿನ್ನ ಮಾತುಗಳನ್ನು ಕೇಳಿ ಅತಿ ಸಂತೋಷ ಪಡುತ್ತಿರುವೆನು. ಆದರೆ ಯುದ್ಧವು ನಿನಗೆ ಸಲ್ಲದು. ನೀನೇ ನಮ್ಮ ವಂಶದ ಚಿಗುರು. ಇನ್ನೂ ಮಾರ್ದವಾವಸ್ಥೆಯಲ್ಲಿಯೇ ಇರುವಿ. ರಣ ರಂಗದ ಭಲ್ಲೆ, ಈಟಿ, ಖಡ್ಗ ಕಠಾರಿಗಳ ಘಾತದಿಂದ ತೊಯ್ದು ಪಟುವಾಗದ ನಿನ್ನ ಕೋಮಲ ಶರೀರವು ಈ ಪ್ರಸಂಗಕ್ಕೆ ಬಾರದು.

ವೃಷಕೇತು—ಇದೇಕೆ ಹೀಗೆನ್ನುತ್ತಿರುವೆ? ಸಿಂಹದ ಮರಿಯೆಂದಾ ದರೂ ಜಂಬುಕವಾಗುವುದೇ? ನೀನೇಕೆ ನಾವು ಹಸ್ತಿನಾವತಿಗೆ ಹೋಗ ಬೇಕೆಂದೆನ್ನುತ್ತಿರುವೆ? ಅದೇನು ನೀನು ಬಭ್ರುವಾಹನನಿಗೆ ಹೆದರು ವಂತಿರುವೆ?

ಅರ್ಜುನ—ಛೆ! ಛೆ! ಅಲ್ಲ; ಅಲ್ಲ. ಅದೇಕೋ ನಿನ್ನನ್ನು ನೋಡು ವಾಗ ನನಗಪ್ರತಿಮವಾದ ಪ್ರೇಮೋತ್ಪನ್ನವಾಗಿ ನೀನು ಹಸ್ತಿನಾವತಿ ಯಲ್ಲಿದ್ದರೆ ಚೆನ್ನಾಗಿರುವೆಯೆಂದು ಹೇಳುತ್ತಿರುವುದು. ರಣಭೂಮಿಯನ್ನು ನೋಡಬೇಕೆಂದಿಷ್ಟವಿರುವುದಾದರೆ ನೀನಿಲ್ಲಿಯೇ ನಿಲ್ಲು. ಈ ಮೇಘವರ್ಣ ನನ್ನಾದರೂ ಕಳುಹಿಕೊಡುವೆನು.

ಮೇಘವರ್ಣ—ಮುತ್ತಾತ! ಅದೇಕೆ ಹಾಗೆನ್ನುವೆ? ನಾನೂ ಬಭ್ರು ವಾಹನನೂ ಸಮಾನಸ್ಕಂಧರಲ್ಲವೇ? ನಾನೂ ಬಭ್ರುವಾಹನನ ಸಂಗಡ ಹೋರಾಡಬೇಕೆಂದಿರುವೆನು. ಅವನನ್ನು ಮಾಯಾಜಾಲದಲ್ಲಿ ಮುಳುಗಿಸಿ, ಅವನ ಹೆಮ್ಮೆಗೆ ತಕ್ಕ ಪ್ರತೀಕಾರವನ್ನು ಮಾಡುವೆನು. ಇದೋ! ನೋಡು. ಹಿಡಿಂಬೆಯ ಮೊಮ್ಮಗನ ತೋಳುಗಳು ಎಷ್ಟು ಪಟುವಾಗಿವೆ! ಆ ಬಭ್ರುವಾಹನನ ಶಕ್ತಿಯನ್ನು ಮುರಿದು ಅವನ ಶರೀರವನ್ನು ಜಜ್ಜಿ ಹಣ್ಣುಮಾಡಿ, ನಿನ್ನ ಪಾದದಡಿಯಲ್ಲಿ ತಂದೊಪ್ಪಿಸುವೆನು.

ಅರ್ಜುನ—ಮಗೂ! ಬೇಡ ಬೇಡ. ನೀನೂ ಹಠಹಿಡಿಯುವುದೇ? ನನಗ್ಯಾಕೋ ಈ ಯುದ್ಧದ ವಿಚಾರದಲ್ಲಿ ಮನಸೋಲುತ್ತಿರುವುದು. ಆದ್ದ ರಿಂದ ಹಸ್ತಿನಾವತಿಯಲ್ಲಿ ನನ್ನಣ್ಣನಿಗೆ ಈ ವಿಷಯವನ್ನು ಕ್ಷಿಪ್ರದಲ್ಲಿಯೇ ತಿಳಿಸಬೇಕಾಗಿರುವುದು. ನೀನು ಶೀಘ್ರವಾಗಿ ಹಸ್ತಿನಾವತಿಗೆ ನಡೆ. ಇಲ್ಲ

ವಾದರೆ, ನಮ್ಮ ಯಜ್ಞಕ್ಕೆ ಭಂಗಬಂದು, ನಮ್ಮ ವಂಶವು ನಿರ್ಮೂಲವಾಗುವ ಪ್ರಸಂಗವೂ ಬರಬಹುದು. ಆ ಕಾರಣ ಅವರು ಮುಂಜಾಗ್ರತೆಯಿಂದಿರಬೇಕಾಗಿ ಮಾಡುವುದೇ ನಮ್ಮ ಕರ್ತವ್ಯವು. ನೀನಿನ್ನು ವ್ಯರ್ಥವಾಗಿ ಕಾಲಕಳೆಯಬೇಡ. ಅದೋ! ಯುದ್ಧದ ಕೋಲಾಹಲವು ಕೇಳಿಬರುತ್ತಿರುವುದು. ಸಾಯುವವರ ಭೀಕರವಾದ ಕಿರಿಚಾಟವೂ, ನೋವಿಂದ ನರಳುತ್ತಿರುವವರ ಆರ್ತನಾದವೂ, ಖಡ್ಗ ಕಠಾರಿಗಳ ಝಣಝಣ ಶಬ್ದಗಳೂ, ಬಾಣಗಳ ಬಿರುಸಿನ ಓಡಾಟವೂ, ನನ್ನ ಹೃದಯವನ್ನು ಕೊರೆದು ರಕ್ತವನ್ನು ಶರೀರದಲ್ಲೆಲ್ಲಾ ಉಕ್ಕಿಸುತ್ತಿರುವವು. ನಾನೀಗಲೇ ರಣರಂಗಕ್ಕೆ ತೆರಳುವೆನು. ಮೇಘವರ್ಣ, ನೀನು ಕೂಡಲೇ ಹಸ್ತಿನಾವತಿಗೆ ಹೊರಡಲುದ್ಯುಕ್ತನಾಗು.

ವೃಷ—ಕಕ್ಕ! ಇದೇನು ನಾವೆಲ್ಲರೂ ಇರುವಾಗ ನೀನೇಕೆ ಯುದ್ಧಕ್ಕೆ ಹೋಗಬೇಕು? ರಣಕ್ಕೆ ತೆರಳಲು ನನಗೆ ಅನುಮತಿಯನ್ನು ಕೊಡು. ವೀರನಾದ ಕರ್ಣಪುತ್ರನಿಗೆ ಇದೊಂದು ಘನತರವಾದ ಮಾತೇ? ಸುಮ್ಮನಾದರೂ ಚಿಂತಿಸಬೇಡ. ನನಗೆ ಅನುಮತಿಯನ್ನು ಕೊಡು! (ಮೊಣಕಾಲೂರಿ ಅಪ್ಪಣೆಬೇಡುವನು.)

ಅರ್ಜುನ—(ತುಸುಕಾಲ ಯೋಚಿಸುತ್ತಿದ್ದು ಉಸುರ್ಗರೆದು-) ಆಗಲಿ! ವೀರ ಕ್ಷತ್ರಿಯನಾದವನನ್ನು ಯುದ್ಧಕ್ಕೆ ತೆರಳಬೇಡವೆಂದು ಹೇಗೆ ತಾನೇ ಹೇಳಲಿ? ಆಗಲಿ! (ಹರಸುತ್ತ ಕೈಹಿಡಿದೆತ್ತಿ) ವಿಜಯಶಾಲಿಯಾಗಪ್ಪ!

[ವೃಷಕೇತು ತೆರಳುವನು-]

ಅರ್ಜುನ—(ವೃಷಕೇತು ತೆರಳಿದ ಮೇಲೆ- ಮೆಲ್ಲನೆ) ಮೇಘವರ್ಣ! ತೆರಳು! ನೀನಿನ್ನು ವಿಳಂಬಮಾಡಬೇಡ! ನನಗೇಕೋ ಇಂದು ಮನಸ್ಸಿನ ಧೃತಿಯು ಕೆಟ್ಟಿರುವುದು. ಹೋಗು! ಹೊತ್ತುಕಳೆಯಬೇಡ.

ಮೇಘ—(ನಮಸ್ಕರಿಸುತ್ತ-) ಆಗಲಿ ತಾತ! (ಹೋಗುವನು-)

ಅರ್ಜುನ—(ಕಿವಿಗೊಟ್ಟು) ಅದೋ! ಯುದ್ಧದ ಕೋಲಾಹಲವು ವಿಶೇಷವಾಗಿ ಕೇಳಿಬರುತ್ತಿರುವುದು. ನಾನೀಗಲೇ ಯುದ್ಧಕ್ಕೆ ತೆರಳುವೆನು. (ಯುದ್ಧಕ್ಕೆ ತೆರಳುತ್ತಾ) ಹಾ! ಇದೇನು ವಿಪರೀತಾವಸ್ಥೆ! ನನ್ನ ನೆರಳೇ ಕಾಣುವುದಿಲ್ಲ. ಇದಾರು ಭೀಕರ ಸ್ವರೂಪದ ಪಿಶಾಚಿ? ಲೋ ಮೃತ್ಯುವೇ!

ನಿನ್ನ ಅದೃಷ್ಟವು ಕೆಟ್ಟಿರಬೇಕು. ಇಲ್ಲವಾದರೆ ಹೀಗೆ ವರ್ತಿಸಲವಕಾಶವಿರುತ್ತಿರಲಿಲ್ಲ. ನೀನು ಸಮೀಪಕ್ಕೆ ಬಂದೆಯಾದರೆ, ಈ ಖಡ್ಗದಿಂದಲೇ ತುಂಡರಿಸುವೆನು; ಹಾ ಕೆಟ್ಟೆ, ಕೆಟ್ಟೆ! ದುಶ್ಶಕುನಗಳೇ ಎಲ್ಲೆಲ್ಲಿಯೂ ಕಾಣಬರುತ್ತಿರುವುವು. ಇರಲಿ; ಆ ಶ್ರೀಕೃಷ್ಣಪರಮಾತ್ಮನಿರುವಾಗ ನಾನು ಹೆದರಬೇಕೆ? ಆತನ ಕರುಣಾಕಟಾಕ್ಷೇಕ್ಷಣದಿಂದಲೇ ನನ್ನೀ ಜನ್ಮವು ಪುನೀತವಾಗಿದೆ. ಹಿಂದೆಯೂ ನನ್ನನ್ನು ಕಾಯ್ದಿರುವನು; ಇನ್ನೂ ಕಾಯುವನು. ಮಾನವರಾದ ನಾವು ಆತನ ಕೈಯ ಆಟದ ಗೊಂಬೆಗಳೇ ಸರಿ. ಅವನು ಪ್ರೇರೇಪಿಸಿದಂತೆ ಮಾಡಲುದ್ಯುಕ್ತನಾಗಿರಬೇಕು. ಕೃಷ್ಣಾ! ಕೃಷ್ಣಾ! ನನ್ನನ್ನು ಕಾಯ್ಯೆ! ಭಕ್ತಶ್ರೇಷ್ಠನಾದ ನನಗೆ ನಿನ್ನ ಅಮೋಘವಾದ ದರುಶನವಿತ್ತು ಸಲಹು. ನನಗೆ ಮಂಗಳವನ್ನೀಡು. (ಮುಂದೆನೋಡಿ-)ಅಹಾ! ಎಂತಹ ಭಯಂಕರವಾದ ಯುದ್ಧ! (ಸ್ವಲ್ಪ ಭರವಸೆಯಿಂದ) ಆದರೂ-ಇಂತಹ ದುಃಸ್ಥಿತಿಯ ಸಮಯದಲ್ಲೂ ನಮ್ಮ ವೃಷಕೇತುವಿನ ಕೈಮುಸಕವು ಒಂದಿಷ್ಟು ಆಶಾಜ್ಯೋತಿಯನ್ನು ಹೊರಹೊಮ್ಮಿಸುತ್ತಿರುವುದು! (ನೋಡಿ ತಲೆಬಾಗಿ-) ಸಹಜ! ಅಂದಿನ ಕುರುಕ್ಷೇತ್ರದ ಯುದ್ಧದಲ್ಲಿ ಇಂತಹ ವೀರಮೂರ್ತಿಯ ಸಂದರ್ಭವೊಂದು ಮೆರೆದಿತ್ತು! (ಚಿಂತೆಯಿಂದ-)ಅಯ್ಯೋ! ಆ ಮಾತಿನ್ನೇಕೆ? ಆ ಮೂರ್ತಿಯನ್ನು ಮೋಸದಿಂದ ಕೆಡಹಿದ ನಮ್ಮ ದೋಷವ ಸ್ಮರಣೆಯನ್ನು ಈ ಹಸುಳೆಯು ತನ್ನ ಉದಾರ ಚರಿತ್ರೆಯಿಂದ-ತನ್ನ ಯುದ್ಧಕೌಶಲ್ಯದಿಂದ ಮರೆಮಾಸುತಿರುವುದು!

(ಪುನಃ ನೋಡಿ ಆಶಂಕೆಯಿಂದ-) ಇದೇನು? ಬಾಲಕನು ಕಾಣದಾದನಲ್ಲ? ಶತ್ರುವಿನ ಮರ್ಮಭೇದಕ ಬಾಣಗಳ ಎಸುಗೆಯು ಮತ್ತೂ ಮತ್ತೂ ಮಿಕ್ಕುತ್ತಿರುವುದು! (ತನ್ನ ಧನುಸ್ಸನ್ನು ನೋಡಿಕೊಳ್ಳುತ್ತ) ಅಹುದು! ಇನ್ನು ಸುಮ್ಮನೆ ನಿಂತು ನೋಡುತ್ತಿದ್ದರೆ ಕೆಲಸವು ಕೈಮೀರಿ ಹೋದೀತು! (ಮುಂದಡಿಯಿಟ್ಟು ಉದ್ವೇಗದಿಂದ) ಅಯ್ಯೋ!-(ಆಕಡೆ ಓಡಿಹೋಗುವನು.)

---

# ದೃಶ್ಯ ೧೦

## ಯುದ್ಧರಂಗ

ಅರ್ಜುನ—(ಓಡಿಬಂದು ವೃಷಕೇತುವನ್ನೆತ್ತಿ) ಅಯ್ಯೋ! ಪ್ರಮಾದವಾಯಿತು; ಪ್ರಮಾದವಾಯಿತು. (ತೊಡೆಯ ಮೇಲೇರಿಸಿಕೊಂಡು ಮುದ್ದಿಕ್ಕಿ) ಹಾ! ಅದೃಷ್ಟವೇ! ದುರ್ದೈವವೇ! ವಿಧಿಯೇ! ಪಾಂಡವ ಕುಲದ ಬೇರನ್ನೇ ಕ್ರೂರವಾದ ತಟಿತ್ಪ್ರಹಾರದಿಂದ ನಾಶಮಾಡಿದೆಯಾ? ಮಗುವೇ! ನಮ್ಮ ವಂಶವೃಕ್ಷದ ಅಭಿನಂದನೀಯ ಅಂಕುರವು ನೀನಾಗಿದ್ದೆ. ನಮ್ಮ ಪವಿತ್ರ ಕುಲಕ್ಕೆ ತಿಲಕಪ್ರಾಯನಾಗಿದ್ದೆ. ಮಗೂ, ನೀನೆನ್ನನ್ನು ಬಿಟ್ಟಗಲಿದೆಯಾ? ಕಂದಾ! ವೃಷಕೇತು; ನೀನೊಮ್ಮೆ ಕಣ್ದೆರೆದು ನೋಡು. ಇಗೋ! ನಿನ್ನ ಚಿಕ್ಕಪ್ಪನೇ ಮಾತಾಡುತ್ತಿರುವನು. ವೃಷಕೇತು; ವೃಷಕೇತು! ಒಂದು ಶಬ್ದವನ್ನಾದರೂ ಉಚ್ಚರಿಸಲಾರೆಯಾ! ಚಿಕ್ಕಪ್ಪಾ! ಬಭ್ರುವಾಹನನು ಸಮಾನಸ್ಕಂಧನು! ಗುಬ್ಬಿಯಮೇಲೆ ಬ್ರಹ್ಮಾಸ್ತ್ರವೇಕೆ? ನಾನೇ ಅವನನ್ನು ಹತಮಾಡುವೆನೆಂದು ಶಪಥವನ್ನಿತ್ತು ಬಂದುದೇಕೆ? ತುಟಿಯೆತ್ತದೆ ಮಲಗಿಕೊಂಡಿರುವೆ. ಮಗೂ! ಮಗೂ!........ವೃಷಕೇತು! ವೃಷಧ್ವಜ! ನಮ್ಮನ್ನು ಬಿಟ್ಟಗಲಿದೆಯಾ? ಪಾಂಡವ ಕುಲದ ಬೀಜವೇ ನಾಶವಾದೆಯಾ? ಅಭಿಮನ್ಯುವನ್ನು ಕಳಕೊಂಡ ನಂತರ ನೀನೇ, ನನ್ನ ಪುತ್ರನಾಗಿದ್ದೆ; ನೀನೇ ನನ್ನ ವಂಶೋದ್ಧಾರಕನಾಗಿದ್ದೆ ನೀನೇ ಕಣ್ಣಿನ ಗೊಂಬೆಯಾಗಿದ್ದೆ. ನಿನ್ನ ತಂದೆಯನ್ನು ಕೊಂದ ಪಾಪಕ್ಕೆ ನಿನ್ನನ್ನೇ ನನ್ನ ಸವಿಾಪವಿರಿಸಿ, ನಿನ್ನ ತಂದೆಯ ಔದಾರ್ಯ, ತೇಜಸ್ಸು, ಶೌರ್ಯಾದಿ ಗುಣಗಳನ್ನು ಮನಸ್ಸಿನಲ್ಲಿ ನಿತ್ಯವೂ ಸ್ಮರಿಸಿ ಕಾಲಕಳೆಯಬೇಕೆಂದಿದ್ದೆ. ಆದರೆ ವಿಧಿಯು ಕ್ರೂರನಾದನೆ! ನೀನೆನ್ನನ್ನು ಕೈಬಿಟ್ಟು ಹೋದೆಯಾ! ಹಾ! ವಿಧಿಯೇ! ನಾನೇನು ಮಾಡಲಿ! ನಮ್ಮಣ್ಣ ಯುಧಿಷ್ಠಿರನು ಕೇಳಿದರೇನು ಹೇಳಲಿ? ನಮ್ಮ ಜನನಿ ಕುಂತೀದೇವಿಯು ಕೇಳಿದರೇನು ಹೇಳಲಿ? ಆ ವೃಕೋದರನಿಗೆಂತು ಸಮಾಧಾನ ಹೇಳಲಿ! ನಕುಲ ಸಹದೇವರನ್ನು ಯಾವ ರೀತಿಯಲ್ಲಿ ಸಂತೈಸಲಿ? ಮಗೂ! ಅಯ್ಯೋ ಮಗೂ! ವೃಷಕೇತೂ! ಒಮ್ಮೆ ಕಣ್ತೆರೆದು ನೋಡಲಾರೆಯಾ? ಮುದ್ದೂ! ನಿನ್ನ ಮುದ್ದಾದ ತುಟಿಗಳನ್ನೊಮ್ಮೆ ತೆರೆಯಲಾರೆಯಾ? (ಒಳಗಡೆ ಶಂಖ ಸದ್ದು ಕೇಳಿಸುವದು.

ಮುಂದೆ ನೋಡಿ) ಯಾರದು? ವಿಕಟವಾಗಿ ನಗುತ್ತಿರುವುದು? ನನ್ನನ್ನು ಕುರಿತು ಹಾಸ್ಯಮಾಡುವಂತಿದೆ! (ಕಿವಿಗೊಟ್ಟು ಕೇಳಿ) ಏನು! ಭಾರತ ಕುಲತಿಲಕನಾದ ಅರ್ಜುನನು ಹೇಡಿಯಂತೆ! ಕೈ ಸಾಗದೆ ಹೆಣದ ಮುಂದೆ ಕುಳಿತು ಹೆಂಗುಸರಂತೆ ಅಳುತಿರುವನಂತೆ! ಛೆ! ಕೇಳಲಾರೆ! ಇಂತಹ ಪರಿಹಾಸಗಳನ್ನು ನಾನೆಂದಿಗೂ ಕೇಳಲಾರೆ! (ವೃಷಕೇತುವನ್ನು ನೋಡಿ ದೈನ್ಯದಿಂದ) ವೃಷಕೇತು! ಅಯ್ಯೋ ವೃಷಕೇತು! (ಪುನಃ ಧೃತಿಯಿಂದ) ಏನಿದು? ಅರ್ಜುನನ ಶಕ್ತಿಯು ನಂದಿಹೋಯಿತೇ? ಛೆ! ಇಲ್ಲ! ಕೈಲಾಸ ಪತಿಯೊಂದಿಗೆ ಕಾದಾಡಿದ ಕಲಿಭಟನಿಗೆ ಈ ತೆರದ ವ್ಯಾಮೋಹವೇ? ಇಲ್ಲ! (ಸಿಟ್ಟಿನಿಂದ ಮುಂದೆ ನೋಡಿ) ಮೂರ್ಖ ನಗಬೇಡ! ಹಸುಳೆಯನ್ನು ಕೊಂದು ಕೆಡಹಿದೆನೆಂಬ ಬಿಂಕದಿಂದ ಮೆರೆಯಬೇಡ! (ಎದ್ದು ನಿಂತು) ಕೇಳು, ಅಷ್ಟ ದಿಕ್ಪತಿಗಳ ಸಾಕ್ಷಿಯಾಗಿ ಹೂಡುವ ಪ್ರತಿಜ್ಞೆಯಿದು! ಈ ಹಸುಳೆಯ ಕಳೆದ ಆತ್ಮಕ್ಕೆ ನಿನ್ನ ಬಿಸುನೆತ್ತರಿನ ಜಲಾಂಜಲಿಯನ್ನು ಕೊಡದಿರುವೆನಾದರೆ ಆ ದೇವೇಂದ್ರನ ಪುತ್ರನಲ್ಲವೆಂದೇ ತಿಳಿ! (ಮೃತ ಕಳೇಬರವನ್ನೆತ್ತುತ್ತ ಒಂದು ಕಡೆಯಿರಿಸಿ ಗಾಂಡೀವವನ್ನು ನೇವರಿಸುತ್ತ) ಸಾಗಲಿ! ಪ್ರಳಯ ರುದ್ರನ ವಿಕಟಾಡಂಬರವು ಇನ್ನು ನಿರಾತಂಕವಾಗಿ ಸಾಗಲಿ. (ಮುನ್ನಡೆಯುತ್ತ ಅತ್ತಿತ್ತ ನೋಡಿ) ಹಾ! ಇದೇನಿದು ಕರಾಳ ವಿಕಾರ ಮೂರ್ತಿ! ದೈವವೋ! ಪಿಶಾಚವೋ! ನಾನೆಂದೂ ಪಿಶಾಚಗಳನ್ನು ಕಂಡರಿಯೆನು. ಎಲೋ! ನೀಚಪಿಶಾಚವೇ! ಅತ್ತ ತೊಲಗು, ತೊಲಗು, ಸಮೀಪಬಂದರೆ ಇದೇ ಖಡ್ಗದಿಂದ ನಿನ್ನನ್ನು ಕತ್ತರಿಸುವೆನು. (ಖಡ್ಗವನ್ನೆತ್ತುವನು. ಪಿಶಾಚವು ಓಡಿಹೋಗುವುದು.) ಓಹೋ, ಇದೇನೋ ವಿಪರೀತ ಶಕುನಗಳು. ಮೊನ್ನೆಯ ದಿನದ ಅಪಶಕುನಗಳ ಪರಿಣಾಮವೇ ಇದು. ಇನ್ನು ಜಯವೆಲ್ಲಿಯದು? ಜಯವೇ! ಪಾಂಡವರ ಜಯಲಕ್ಷ್ಮಿಯು ಪಲಾಯನಗೈದಳು. ಪಾಂಡವರ ವಂಶಮೂಲಕ್ಕೆ ಕುಠಾರದಾಘಾತವಾಯಿತು. ಇನ್ನು ಧರ್ಮಜನು ಯಜ್ಞವನ್ನೆಂತು ಪೂರೈಸುವನು. ಅಯ್ಯೋ! ಸರ್ವನಾಶವಾಯಿತು. ಇಂದು ಪಾಂಡವರಭ್ಯುದಯದ ಭಾಸ್ಕರನು ಮುಳುಗಿದನು. ನಮ್ಮ ಮೊದಲಿನ ಶತ್ರುಗಳಲ್ಲಿದ್ದವರೆಷ್ಟು ಹಾಸ್ಯ ಮಾಡುತ್ತಿದ್ದರೋ! ಆ ದುಷ್ಟ ಕೌರವರು ಮೊದಲೇ ನಾಶವಾದುದು ಒಳ್ಳೆದಾಯಿತು.

ಓಹೋ! (ಬೆಚ್ಚಿಬೀಳುವನು.) ಇದಾರು? ದುರ್ಯೋಧನನೇ! ದುರ್ಯೋಧನಾ! ನೀಚ! ನೀನಿನ್ನೂ ಬದುಕಿರುವೆಯಾ? ಹೋ ಹೋ! ಸೈಂಧವ, ಕರ್ಣ ಬನ್ನಿರಿ; ಬನ್ನಿರಿ. ನನ್ನ ಮಗು ಅಭಿಮನ್ಯುವನ್ನು ಕೊಂದವರು ನೀವಲ್ಲವೇ? ಬನ್ನಿರಿ ಇತ್ತ! ಇನ್ನೊಮ್ಮೆ ನಿಮಗೆ ಬುದ್ಧಿ ಕಲಿಸುವೆನು. ಛಿ! ಛಿ! ಇದಾರು ದುಃಶ್ಯಾಸನ. ಪಾಪಿ! ನೀನೂ ಬಂದೆಯಾ? ಈಗಲೇ ಹೊರಟು ಹೋಗು. ಏನು? ನನ್ನನ್ನು ಹಿಡಿದುಕೊಂಡು ಹೋಗಲು ಬಂದಿರುವೆಯಾ? ಅತ್ತ ತೊಲಗು. ಎಲ್ಲರೂ ಬರುತ್ತಿರುವರು. ಅಯ್ಯಯ್ಯೋ! ಹೆದರಿಕೆ ಇಲ್ಲದೆ ಸಮೀಪಕ್ಕೆ ಬರುತ್ತಿರುವರಲ್ಲವೇ? ಕಷ್ಟವಾಯಿತು. ಕಷ್ಟ ಕಷ್ಟ. ಕೃಷ್ಣಾ ಕೃಷ್ಣಾ! (ಯೋಚಿಸುತ್ತಾ ಆಲಿಸುವವನಂತೆ) ಯಾರದು? ನನ್ನೆಡೆ ಕೃಪಾದೃಷ್ಟಿಯನ್ನು ಬೀರಿ ಗುಡುಗಿನ ಮೊಳಗಿನಂತೆ ಗಂಭೀರವಾಗಿ, ಸಾರಿ ಸಂತೈಸುತಿರುವುದು. ಏನನು? (ಕಿವಿಗೊಟ್ಟು ಆಲಿಸಿ ಅನುಕರಿಸುವವನಂತೆ–)

> ಕ್ಷುದ್ರಂ ಹೃದಯದೌರ್ಬಲ್ಯಂ
> ತ್ಯಕ್ತ್ವೋತ್ತಿಷ್ಠ ಪರಂತಪ!

ಸಹಜ! ಸಹಜ! ಕೃಷ್ಣಾ! ನನ್ನ ಹೃದಯ ದೌರ್ಬಲ್ಯವನ್ನು ಕ್ಷಮಿಸು! ವೀರಕ್ಷತ್ರಿಯನಾಗಿ-ಹೇಡಿಗಳಂತೆ ಹಲುಬುತಿರುವೆನು! ದೇವ! ನಿನ್ನ ಕೃಪೆಯೊಂದಿದ್ದರೆ ಇಂತಹ ಕ್ಷುದ್ರ ಸಮರಗಳೆಲ್ಲಾ ಯಾವ ದೊಡ್ಡ ಹೆಮ್ಮೆಯ ಮಾತು! (ಆ ಕಡೆ ನಗು ಕೇಳಿಸುವುದು. ಹುರುಪಿನಿಂದ ಮುಂದೆ ನೋಡಿ) ನಗಬೇಡ ಮೂರ್ಖ! ನಗುವ ಕಾಲವು ಕಳೆದು ಅಳುವಿನ ಅತಿಥಿಯಾಗುವ ಸಮಯವು ಬಂದೊದಗಿತೆಂದು ತಿಳಿ! ಇದೋ! ನಿನ್ನ ಪಾಲಿನ ಯಮನು ಮೂರ್ತಿವುತ್ತಾಗಿ ಬರುತ್ತಿರುವನು! (ಉತ್ಸಾಹದಿಂದ ಹಾರಿ ಮುಂದೆರಳುವನು--)

---

## ದೃಶ್ಯ ೧೧

ಅರ್ಜುನ—(ಘಾತನಾಗಿ ಬೀಳುವನು.) ಹಾ ಕೃಷ್ಣಾ! ಕೃಷ್ಣಾ! ನೀನೆನ್ನ ಕಾಪಾಡಲಾರದೆ ಹೋದೆಯಾ!

ಬಭ್ರುವಾಹನ—ಕೃಷ್ಣನು ಚೆನ್ನಾಗಿ ಕಾಪಾಡಿದನು ಅರ್ಜುನಾ!

(ನಗುತ್ತ) ಈಗ ನಾನು ನಿನ್ನ ಮಗನೋ! ವಿಟಪುರುಷನಿಂದ ವೇಶ್ಯೆಯಲ್ಲಿ ಜನಿಸಿದವನೋ? ನಿನ್ನ ನಾಲಗೆಯ ಗರ್ವವಿಂದು ಮುಗಿಯಿತು. ನಿನ್ನ ಹೆಮ್ಮೆ ಮುರಿದುದನ್ನು ನನ್ನ ಮಾತೆಯರಿಗೆ ತಿಳಿಸಿ, ನಿನ್ನಂಥ ವೀರರನ್ನು ಗೆದ್ದ ಸ್ಮಾರಕವಾಗಿ ಈ ಕರವಸ್ತ್ರವನ್ನು ನಿನ್ನ ಹೃದಯದ ಕಾರಂಜಿ ಯಿಂದುಕ್ಕುವ ರಕ್ತಾಂಬುಧಿಯಲ್ಲಿ ಅದ್ದಿ, ನಿನ್ನ ನೆನಪುಮಾಸದಂತೆ ನನ್ನ ಹೃದಯದಲ್ಲಿಟ್ಟುಕೊಳ್ಳುವೆನು. (ರಕ್ತದಿಂದ ಕರವಸ್ತ್ರವನ್ನು ಅದ್ದಿ ಮೇಲಕ್ಕೆತ್ತಿ ನೋಡುತ್ತಿರುವನು.) ಹಾ ಇದೇನಿದು! ರ-ಕ್ತ-ವ-ಲ್ಲ-ವೇ-? ನನ್ನ ಪಿತನ ರಕ್ತ! ನನ್ನ ಜನ್ಮದಾತನ ರುಧಿರ! (ಕಣ್ಣು ಕೆರಳಿಸಿ ನೋಡು ವನು.) ಛಿ! ಪಾಪಿ ನಾನು! ನಾನು ಮಹಾ ಪಾಪಿ, ಪಿತೃದ್ರೋಹಿ, ಪಿತೃಘಾ ತಕಿ- ಎಂಥಾ ಕ್ರೂರಕೃತ್ಯವನ್ನೆಸಗಿದೆ! ನನ್ನ ಜನ್ಮದಾತನನ್ನು ನನ್ನ ಈ ಕೈಗಳಿಂದಲೇ ಸಂಹರಿಸಿದೆನು. ಛಿ! ಪಾಪಿ! ಪಾಪಿ! ಬಭ್ರುವಾಹನ! ನೀನೇಕೆ ಬದುಕಿರುವೆ! (ಕೆಳಗೆ ಕುಳಿತುಕೊಂಡು ಅರ್ಜುನನ ತಲೆಯನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ಕಣ್ಣೀರು ಸುರಿಸುವನು.) ಓ ಪಿತನೇ! ಅರ್ಜುನನೇ! ಹೋದೆಯಾ? ಅಪ್ಪಾ! ಅರ್ಜುನಾ! ದಶಬಿರುದುಗಳ ಗಂಡ! ಲೋಕೈಕ ವೀರ! ನನಗೇಕೆ ಜನ್ಮವನ್ನಿತ್ತೆ? ನನ್ನ ಕೈಯಿಂದಲೇ ಹತನಾಗ ಬೇಕೆಂದು ನನಗೆ ಜನ್ಮವನ್ನು ಕೊಟ್ಟೆಯಾ? ಇನ್ನ್ಯಾರನ್ನು ತಂದೆಯೆಂದು ಕರೆಯಲಿ? ಹುಟ್ಟಿದಂದಿನಿಂದ ತಂದೆಯನ್ನು ಕಾಣೆನು! ತಂದೆಯ ಅಂಗ ಸಂಗದ ಸೌಖ್ಯವನ್ನರಿಯೆನು. ಹುಟ್ಟಿದಂದಿನಿಂದ ನಿನ್ನ ಮುಖವನ್ನು ಕಾಣದೆ ನಿತ್ಯವೂ ನಿನ್ನನ್ನು ಧ್ಯಾನಿಸುತ್ತ ಕಾಲಕಳೆಯುತ್ತಿರಲು, ಈ ಅಪ ಘಾತದಲ್ಲಿ ನನ್ನ ಕೈಗೆ ಸಿಕ್ಕಿ ಹತನಾದೆಯಾ? ಅಪ್ಪಾ! ಅರ್ಜುನಾ! ಪುತ್ರ ನಾದ ನನ್ನ ಮೇಲೆ ಅನ್ಯಾಯವಾಗಿ ಕೋಪಿಸಿ, ಈಗ ನನ್ನನ್ನು ಬಿಟ್ಟಗಲಿ ದೆಯಾ? ಅಪ್ಪಾ! ಅಪ್ಪಾ!! ಒಮ್ಮೆ ಮಾತಾಡು. ನಾನು ನಿನ್ನ ಪುತ್ರ ನಲ್ಲವೇ? ನಾನಪರಾಧವನ್ನು ಮಾಡಿದೆ; ನಾನೇ ಘಾತಕಿಯಾದೆ. ನನ್ನನ್ನು ಕ್ಷಮಿಸಲಾರೆಯಾ? ಪಂಥವನ್ನು ಹೂಡಿ ನಾನೇ ಕೆಟ್ಟೆ, ಕೆಟ್ಟೆ! ದುಷ್ಕರ್ಮದ ಕೂಪಕ್ಕೆ ಬಿದ್ದೆ! ಹಾ ವಿಧಿಯೇ, ನಾನು ಪಿತೃಘಾತಕಿಯಾಗಿ ಬಾಳಿ ಇನ್ನೇನು ಪ್ರಯೋಜನ! ನನ್ನ ದುಷ್ಪ್ರವರ್ತನಕ್ಕೆ ಯಾವ ಶಿಕ್ಷೆಯನ್ನು ಅನುಭವಿಸಲಿ? (ತಲೆಗೆ ಹೊಡಕೊಳ್ಳುವನು)

ಮರುತ್ಕಂತ....(ಸ್ವಗತ) ಮಹಾರಾಜನಾದ ಈ ಬಭ್ರುವಾಹನನು ರಾಜಧರ್ಮವನ್ನು ಬಿಟ್ಟು, ಸಂಸಾರಬಂಧನದಲ್ಲಿ ಬಿದ್ದು ಹೊರಳಾಡುತ್ತಿರುವನು. ಇವನನ್ನು ಎಚ್ಚರಿಸದಿದ್ದರೆ ಕಾರ್ಯಘಾತಕವಾಗಬಹುದು. (ಪ್ರಕಾಶ) ಮಹಾರಾಜನೇ! ಮಿಂಚಿ ಹೋದ ಕಾರ್ಯಕ್ಕೆ ಚಿಂತಿಸಿ ಫಲವೇನು? ಮನುಷ್ಯರು ಮಾಯಾವಶರಾಗಿ ತಮಗಿಚ್ಛೆಯಿಲ್ಲದ ಕಾರ್ಯವನ್ನೆಸಗುವ ಪ್ರಸಂಗವು ಎಷ್ಟೋ ವೇಳೆ ಒದಗುವುದು. ನಿನ್ನೆಯ ದಿನ ಇದೇ ಅರ್ಜುನನು ತಮ್ಮನ್ನು ಮಗನೆಂದು ತಿಳಿದಿದ್ದರೂ, ಕರ್ಮಾಧೀನನಾಗಿ, ಉಪೇಕ್ಷಿಸಿ ಈ ಪರಿಣಾಮಕ್ಕೆ ಕಾರಣನಾದನು ಬ್ರಹ್ಮಲಿಖಿತದಂತೆಲ್ಲವೂ ಜರಗಿದೆ. ನಿನ್ನೆ ಆತನು ತಮ್ಮನ್ನೂ ತಮ್ಮ ಮಾತುಶ್ರೀಯವರನ್ನೂ ಹೀಯಾಳಿಸಿ ಜರೆದುದೆಲ್ಲವೂ ಮರೆತುಹೋಯಿತೇ?

ಬಭ್ರುವಾಹನ—ಮರುತ್ಮಂತಾ! ನಿನಗೇಕೇ ಕೃತ್ಯದ ಕಾಠಿಣ್ಯವು ಹೊಳೆಯದು. ನಿನ್ನೆದೆಯು ಕಲ್ಲು. ನನ್ನ ತಂದೆಯನ್ನು ಸಂಹರಿಸಿದುದರಿಂದುಂಟಾದ ವೇದನೆಯನ್ನು ನೀನೇನು ಅರಿತಿರುವಿ? ನನ್ನ ಸಕಲಾಂಗಗಳು ಸಡಲಿಹೋಗಿ ನೋವಿನಿಂದ ಸಿಡಿಯುತ್ತಿವೆ.

ಮರುತ್ಮಂತ—ಮಹಾರಾಜಾ! ತಾವು ಹಂಬಲಿಸಿ ಇನ್ನು ಫಲವೇನ? ಕ್ಷತ್ರಿಯಕುಲಕ್ಕನುಗುಣವಾದ ಕರ್ಮವನ್ನು ಮಾಡಿರುತ್ತೀರಿ. ಧರ್ಮಸಂಸ್ಥಾಪನೆಯು ಮುಂದೆ ಬಳಗವೆಲ್ಲಿ? ಬಂಧುಬಾಂಧವರೆಲ್ಲಿ? ಸತಿಸುತಮಾತಾಪಿತೃಗಳೆಲ್ಲಿ? ರಾಜಮರ್ಯಾದೆಯನ್ನು ಕಾಪಾಡುವುದಕ್ಕಾಗಿ ನರಪತಿಯರು ಅತಿ ಹೇಯವಾದ ಕೆಲಸವನ್ನಾದರೂ ಮಾಡಲು ಹಿಂಜರಿಯಬಾರದು. ಇಂದು ತಾವೇನೂ ಘೋರಕೃತ್ಯ ಮಾಡಿರುವಂತೆ ತೋರಿಬರುವುದಿಲ್ಲ. ತ್ರಿಲೋಕವೀರನೆಂದೆಣಿಸಿದ ಅರ್ಜುನನ ವೀರಪ್ರತಾಪವನ್ನು ಮುರಿದುದರಿಂದ ತಮ್ಮ ಕೀರ್ತಿಯು ನಾಲ್ಕು ದಿಕ್ಕುಗಳಲ್ಲಿಯೂ ಹಬ್ಬಿತು.

ಬಭ್ರುವಾಹನ—ಆದರೆ, ಆ-ದ-ಟಿ-ಕೀರ್ತಿ ಹೆಣ್ಣಿಗೆರಡು ನಾಲಿಗೆಗಳಿರುವುವು. ಒಂದು ನಾಲಿಗೆಯಿಂದ ನನ್ನ ಶೌರ್ಯವನ್ನು ಹೊಗಳಿದರೆ ಇನ್ನೊಂದು ನಾಲಿಗೆಯಿಂದ ನನ್ನನ್ನು 'ಪಿತೃಘಾತಕಿ' ಎಂದು ಕರೆದೇ ಕರೆಯುವಳು.

ಮರುತ್ಮಂತ—ಮಹಾರಾಜಾ! ಮಹಾವೀರರಾದ ತಾವು ಈ ಜನರಾಡುವ ಮಾತಿಗೆ ಹೆದರುವುದೇ? ತಮ್ಮ ಧರ್ಮವನ್ನು ಪರಿಪಾಲಿಸಲು ಮಾಡಿದ ಸಾಹಸಕೃತ್ಯವು ಭೂಲೋಕದಲ್ಲಿ ಬೆಳಗುವುದೇ ಹೊರತು ಮಲಿನವಾಗದು. ಹಿಂದೆ, ಪ್ರಹ್ಲಾದನು ತನ್ನ ತಂದೆಯ ಮರಣಕ್ಕೆ ಕಾರಣನಾದನು. ಆದರೆ ಭೂಲೋಕವು ಪ್ರಹ್ಲಾದನನ್ನು 'ಭಕ್ತಮಣಿ' ಎಂದೇ ಉದ್ಘೋಷಿಸುವುದಲ್ಲದೆ 'ಪಿತೃಘಾತಕಿ' ಎಂದು ಕರೆಯುವುದೇ? ಮಹಾತಪಸ್ವಿಯಾದ ಪರಶುರಾಮನಾದರೂ ತಂದೆಗಿಂತಲೂ ಪ್ರಿಯಳಾದ ತನ್ನ ಹೆತ್ತ ತಾಯನ್ನು ಕೊಂದನು. ಆದರೆ, ಪರಶುರಾಮನು ಪಿತೃವಾಕ್ಯ ಪರಿಪಾಲನೆಗಾಗಿ ಕೊಂದನೆಂದೇ ಪುರಾಣಗಳು ಕೊಂಡಾಡುವುವಲ್ಲದೆ, 'ಮಾತೃಘಾತಕಿ' ಎಂದು ಕೂಗಿಡುತ್ತಿರುವುವೇ? ತಮ್ಮಂಥ ಶಾಸ್ತ್ರಜ್ಞರಿಗೆ ಇನ್ನೂ ಹೆಚ್ಚು ಹೇಳಬೇಕೇ?

ಬಭ್ರುವಾಹನ—ಇವನೇನೋ ಹೇಳುತ್ತಿರುವನು. ಭೂಲೋಕದಲ್ಲಿ ಸಂಸಾರಬಂಧನವು ವಿಶೇಷವಾಗಿ ಇವನಿಗೆ ತೋರದು. ಲೌಕಿಕ ರೀತಿಯಲ್ಲಿ ವಿಚಾರಿಸಲು, ತಂದೆಗಿಂತ ಬಂಧುವಿಲ್ಲ. ತಂದೆಯೇ ಜನ್ಮದಾತ. ತಂದೆಯೇ ಸೌಖ್ಯದಾತ! ಅಂತಹ ತಂದೆಯನ್ನು ಸಂಹರಿಸಿ ಕೃತಘ್ನನಾಗಿ ಬಾಳುವುದಕ್ಕಿಂತ ಹೇಯವಾದ ಬಾಳ್ವಿಕೆಯು ಲೋಕದಲ್ಲಿಲ್ಲ. ಕ್ರೂರ ಜಾತಿಯ ಪ್ರಾಣಿಗಳು ತಾಯ್ತಂದೆಯರನ್ನು ಲಕ್ಷಿಸದೆ, ಅವನ್ನೇ ಸಂಹರಿಸಿ ಕೆಲವು ವೇಳೆ ಭಕ್ಷಿಸಬಹುದು. ಆದರೆ ಜೀವಜಂತುಗಳಲ್ಲೆಲ್ಲಾ ಶ್ರೇಷ್ಠನಾದ ಮಾನವನು ತುಚ್ಛ ಜೀವಿಗಳಿಗಿಂತಲೂ, ಹೀನನಾಗಿ ಬಾಳುವುದೇ? ಮರುತ್ಮಂತಾ! ನಿನ್ನ ಕಣ್ಣಿನಲ್ಲಿ ರಕ್ತದ ಹನಿಯೇ ಇಲ್ಲವೆಂದು ತೋರುವುದು. ನಾನೀ ಕೃತ್ಯವನ್ನೆಸಗಿ ಜೀವಿಸಿ ಫಲವಿಲ್ಲವೆಂದೇ ತೋರುವುದು!

ಮರುತ್ಮಂತ—ಮಹಾರಾಜ್! ಸಕಲಶಾಸ್ತ್ರ ಪಾರಂಗತರಾದ ತಮಗೆ ನಾನು ಹೆಚ್ಚು ಹೇಳಲಾರೆನು. ತಮ್ಮ ತಂದೆಯೇ ಕುರುಕ್ಷೇತ್ರದಲ್ಲಿ ಮಹಾಯೋಗ್ಯರೂ, ವೀರರೂ, ಧೀರರೂ, ಪೂಜ್ಯರೂ, ಗುರುಗಳೂ ಆದ ಪಿತಾಮಹ ಭೀಷ್ಮಾಚಾರ್ಯರನ್ನೇ ಸರಳುಗಳಿಂದ ಜರ್ಝರಿತರನ್ನಾಗಿ ಮಾಡಲಿಲ್ಲವೇ? ತನ್ನ ಒಡಹುಟ್ಟಿದ ಕರ್ಣನನ್ನೇ ಅರ್ಜುನನು ಯುದ್ಧರಂಗದಲ್ಲಿ ಮೋಸದಿಂದ ಕೊಲ್ಲಲಿಲ್ಲವೇ? ಅರ್ಜುನನು ಹೀಗೆಯೇ ಕುರು

ಕ್ಷೇತ್ರ ಯುದ್ಧಾರಂಭದ ಮೊದಲು ಬಂಧುಪ್ರೇಮಪರವಶನಾಗಿ ನಿಂತಿರಲು, ಶ್ರೀಕೃಷ್ಣ ಪರಮಾತ್ಮನು ಬೋಧಿಸಿದ ತತ್ವಗಳು ತಮಗೆ ಜ್ಞಾಪಕದಲ್ಲಿರಬಹುದು. ಈ ಮಾನವನು ತನ್ನ ಕರ್ಮಾಧೀನನು. ಪ್ರತಿಯೊರ್ವನೂ ತನ್ನ ಪುರಾಕೃತ ಕರ್ಮದಿಂದ ತನ್ನ ಜೀವಮಾನ ಕಾಲದಲ್ಲಿ, ತನ್ನ ಮನಸ್ಸೊಡಂಬಡದ ಅತಿ ತುಚ್ಛ ಕೃತ್ಯಗಳನ್ನೂ ಮಾಡಬೇಕಾಗಿದೆ. ಕರ್ಮತತ್ಪರನಾದಾಗ ಬಂಧುಬಾಂಧವರು ಇಷ್ಟಮಿತ್ರರು ಮೊದಲಾದ ಸಂಬಂಧವೇ ಮಾನವನಿಗೆ ತೋರದು. ಈ ಅರ್ಜುನನಾದರೂ ಹಿಂದಿನ ಜನ್ಮದ ಕರ್ಮದ ಫಲದಿಂದಲೇ ತಮ್ಮಿಂದ ಘಾತನಾದನು. ಆದ್ದರಿಂದ ಈಗ ಹಂಬಲಿಸಿ ಫಲವೇನು?

ಬಭ್ರುವಾಹನ....(ಸ್ವಗತ) ಆಹುದು; ಮನುಷ್ಯನು ಕರ್ಮಾಧೀನನು; ತನ್ನ ಪೂರ್ವಸಂಚಿತ ಕರ್ಮಫಲವನ್ನು ತನ್ನ ಜೀವಿತ ಕಾಲದಲ್ಲೇ ಉಣ್ಣಬೇಕಾಗಿದೆ. ಆದರೆ,-ತನ್ನ ಕರ್ಮಕ್ಕೆ ತಾನೇ ಅಧಿಪತಿಯು. ಇಂದಿನ ಕರ್ಮಕ್ಕೆ ನಾನೇ ಅಧಿನಾಯಕನು. ಅಹುದು.......ಅಹುದು.... ಆ—ದ—ರೆ........ನನ್ನ ತಂದೆಯೂ ಆತನ ಕರ್ಮಕ್ಕೆ ಅಧಿಪತಿಯು. ತನ್ನ ಕರ್ಮದಿಂದಲೇ ಈ ದುರ್ದಶೆಯು ಆತನಿಗೆ ಸಂಭವಿಸಿತು. ಮರುತ್ಮಂತನು ಹೇಳುವುದರಲ್ಲಿಯೂ ಹುರುಳಿದೆ. ಆದರೆ, ಯಶೋವಧುವಿನ ಇನಾಕಲಿಗೆಯನ್ನು ನೆನೆಯುವಾಗ, ನನ್ನ ಹೃದಯವು ಕಂಪಿಸುತ್ತಿದೆ. ಕರ್ಮವೆಂಬ ಮಾಯೆಯು ಜೆಂಬತ್ತಿ ನನ್ನನ್ನು ಈ ರೀತಿಯಾಗಿ ವರ್ತಿಸಲು ಪ್ರೇರೇಪಿಸಿತು. ನಾನು ಈ ಕರ್ಮದ ಆಜ್ಞಾಧಾರಕನೇನೋ ಸರಿ. ಆದರೂ ಈ ರಣರಂಗವನ್ನು ಬಿಟ್ಟು, ಪುರಪ್ರವೇಶ ಮಾಡಲು, ಜನರೆಲ್ಲರೂ ನಾನು ಪಿತೃಘಾತಕಿಯೆಂದು ಹೇಳರೇ! ಈಗಲೇ ವಾತಾವರಣವೇ ಪಿತೃಘಾತಕಿಯೆಂದು ಧ್ವನಿಗೊಡುತ್ತಿರುವುದು. ಜನಸ್ತೋಮದ ಅಸಂಖ್ಯಾತ ನಾಲಿಗೆಗಳನ್ನೆಂತು ತಡೆಗಟ್ಟಲಿ?

(ಆಲೋಚಿಸಿ) ಆದರೆ ಈ ಕೃತ್ಯಕ್ಕೆ ನಾನೊಬ್ಬನೇ ಹೊಣೆಗಾರನಾಗೆನು; ರಾಜನೀತಿಯಂತೆ ನನ್ನ ಧರ್ಮವನ್ನು ಕಾಪಾಡಲು ಈ ಕೃತ್ಯವನ್ನು ಮಾಡಬೇಕಾಯಿತು. ನಾನೇ ಈ ದುಃಸ್ಥಿತಿಗೆ ಕಾರಣನೋ? ಛೆ! ಅಲ್ಲ ಅಲ್ಲ. (ಪ್ರಕಾಶ) ಮರುತ್ಮಂತಾ! ನೀನು ಹೇಳಿದುದೆಲ್ಲವೂ ಮಾದ

ಟ್ಟಾಯಿತು. (ಏಳುವನು.) ಇನ್ನು ಮುಂದೇನು ಮಾಡಬೇಕಾಗಿರುವುದು?

ಮರುತ್ಮಂತ—ಈ ಜಯವಾರ್ತೆಯನ್ನು ದೇವಿಯರಿಗೆ ತಿಳಿಸುವದು.

ಬಭ್ರುವಾಹನ—ಛಿ! ಅದು ನನ್ನಿಂದಾಗದು.

ಮರುತ್ಮಂತ—ಮಹಾರಾಜಾ! ತಾವೇಕಿನ್ನು ಹಿಂಜರಿಯುತ್ತಿರುವಿರಿ? ತಮ್ಮ ತಂದೆಯು ಪ್ರಾರಬ್ಧಕರ್ಮಫಲವನ್ನನುಭವಿಸಿದನು. ಅದಕ್ಕೆ ಪಶ್ಚಾತ್ತಾಪಪಡಲು ಕಾರಣವಿಲ್ಲ. ಇನ್ನು ಧೈರ್ಯವಾಗಿರುವುದೇ ಮೇಲು.

ಬಭ್ರುವಾಹನ—ಮರುತ್ಮಂತಾ! ಆದರೆ ನನ್ನೀ ಮುಖವನ್ನು ನನ್ನ ತಾಯಿಗೆ ಹೇಗೆ ತಾನೇ ತೋರಿಸಲಿ?

ಮರುತ್ಮಂತ—ಹಿರಣ್ಯಾಕ್ಷನನ್ನು ಕೊಲ್ಲಿಸಿದ ಪ್ರಹ್ಲಾದನು ತನ್ನ ಮುಖವನ್ನು ಜನನಿ ಕಯಾದುವಿಗೆ ಹೇಗೆ ತೋರಿಸಿದನು?

ಬಭ್ರುವಾಹನ—ಆದರೆ ಪ್ರಹ್ಲಾದನಿಗೂ ನನಗೂ ಬಹಳ ಅಂತರವಿದೆ. ಲೋಕಕಂಟಕನಾದ ಹಿರಣ್ಯಾಕ್ಷನಿಗೂ ಅರ್ಜುನನಿಗೂ ಹೋಲಿಕೆಯೇ?

ಮರುತ್ಮಂತ—ಇಬ್ಬರೂ ಕರ್ಮಾಧೀನರು. ನಿನ್ನೆ ಅರ್ಜುನನಾಡಿದ ಮಾತಿನಿಂದಲ್ಲವೇ ಈ ಘಟನೆಯುಂಟಾಯಿತು. ಆತನು ತನಗೆ ತಾನೇ ಮೃತ್ಯುವಾದನು.

ಬಭ್ರುವಾಹನ—ಆಹುದು; ಆಹುದು. ಇನ್ನು ಮುಂದೇನು ಮಾಡಲಿ?

ಮರುತ್ಮಂತ—ಧೈರ್ಯದಿಂದ ಪುರಪ್ರವೇಶಮಾಡಿ ಪ್ರೇತಸಂಸ್ಕಾರ ಮಾಡುವುದು. ಅಲ್ಲದೆ, ತಮ್ಮ ಮಾತೆಯ ಎದುರಿನಲ್ಲಿ ಧೈರ್ಯದಿಂದಿರುವುದೆ.

ಬಭ್ರುವಾಹನ—ಹಾಗೆಯೇ ಆಗಲಿ; ಹೊರಡು. ನಮ್ಮ ಸೈನಿಕರೆಲ್ಲರೂ ಜಯಪತಾಕೆಗಳನ್ನು ಹಿಡಿದು ಮುಂದೆ ನಡೆಯಲಿ.

ಮರುತ್ಮಂತ—ಅಪ್ಪಣೆ. ಮಹಾರಾಜ್! ಅದೋ, ತಮ್ಮ ಚಿಕ್ಕಮ್ಮನವರೂ, ಮಾತೆಯೂ ಬರುತ್ತಿರುವರು. ಧೊರೆಯೇ, ತಾವು ವೀರರು.

ಬಭ್ರುವಾಹನ—ಏನು ವೀರನಲ್ಲವೇ? ನಾನೆಂದೂ ಧೈರ್ಯಗೆಡೆನು. ಅವರಿಗೀ ಪ್ರಸಂಗವು ಹೇಗೆ ತಿಳಿಯಿತು.

ಮರುತ್ಮಂತ—ಅಂತಃಪುರದ ಅಂತಸ್ಥಿನಿಂದ ಕಾಳಗವನ್ನು ನೋಡು ತಿದ್ದರು.

ಬಭ್ರುವಾಹನ—ಬಹು ಒಳ್ಳೆಯದಾಯಿತು. ಹಾಗಾದರೆ ನನ್ನ ಕಾರ್ಯವನ್ನು ಕಣ್ಣಾರೆ ಕಂಡು ಆನಂದಪಟ್ಟಿರಬಹುದಲ್ಲವೇ?

ಮರುತ್ಮಂತ—ಮತ್ತಿನ್ನೇನು? (ಚಿತ್ರಾಂಗದೆ ಉಲೂಪಿಯು ಸಂಗಡ ಅರ್ಜುನನ ಹತ್ತಿರಕ್ಕೆ ಬರುತ್ತಿರುವಳು.)

ಬಭ್ರುವಾಹನ—(ಮುಂದೆ ಹೋಗಿ) ಅಮ್ಮಾ! ತಮ್ಮ ಬಸುರಿನಲ್ಲಿ ಹುಟ್ಟಿದ ಪುತ್ರನ ಕಾರ್ಯವನ್ನು ನೋಡಿದಿರಾ! ತ್ರಿಲೋಕ ವೀರನನ್ನು ನೆಲಕ್ಕುರುಳಿಸಿರುವೆನು.

ಚಿತ್ರಾಂಗದೆ—ಅಯ್ಯೋ ಘಾತವಾಯಿತೇ. ಪ್ರಮಾದ! ಪ್ರಮಾದ!.... ಛಿ! ಛಿ! ನಿನ್ನ ಶೌರ್ಯವನ್ನು ಸುಡು, ಸುಡು! ಪಿತೃದ್ರೋಹಿ! ಪಿತೃ ಘಾತುಕ! ನನ್ನ ಬಸುರಿನಲ್ಲಿ ಹುಟ್ಟಿ, ನನ್ನ ಮಾಂಗಲ್ಯ ಸೂತ್ರವನ್ನು ಹರಿದೆ! (ಅರ್ಜುನನ ಕಳೇಬರದ ಪಕ್ಕದಲ್ಲಿ ಕುಳಿತು ನೋಡಿ) ಹಾ! ವಿಧಿಯೇ! ನನ್ನ ಕುಂಕುಮವನ್ನಳಿಸಿದೆಯಾ! ಅರ್ಜುನಾ! ಫಲ್ಗುನಾ! ಒಮ್ಮೆ ಕಣ್ದೆರೆದು ನೋಡು! ಇನ್ನೆಂದು ನಿನ್ನ ಸುಖವನ್ನು ಪಡೆಯಲಿ? ಹದಿನೆಂಟು ವರ್ಷ ನಿನ್ನ ಬರೋಣವನ್ನು ನಿರೀಕ್ಷಿಸಿಕೊಂಡಿದ್ದು, ಈ ಕಾಲ ದಲ್ಲಿ ಮೃತ್ಯುವಶನಾದ ಮೇಲೆ ನನ್ನ ಕೈಗೆ ಸಿಕ್ಕಿದೆಯಾ? ಪ್ರಿಯಾ! ಇನ್ನೆಂದಿಗೆ ನಿನ್ನನ್ನು ಕಾಣಲಿ? ಇನ್ನಾವಾಗ ನಿನ್ನ ಸಂಗಡ ಕ್ರೀಡಾ ವಿನೋದದಿಂದ ಮೆರೆಯಲಿ? (ಉಲೂಪಿಯು ಅಳುತ್ತಿರುವಳು.)

ಚಿತ್ರಾಂಗದೆ—ಅರ್ಜುನಾ! ಅರ್ಜುನಾ! ಅರ್ಜುನಾ! ಒಮ್ಮೆ ಮಾತಾಡು. ಇದೋ ನಿನ್ನ ಪ್ರಿಯ ಸತಿಯು, ನಿನ್ನನ್ನೇ ನಂಬಿ ಮರುಳಾಗಿ ನಿನ್ನಲ್ಲೇ ಲೀನವಾಗಿದ್ದ ಈ ನಿನ್ನ ದಾಸಿಯು ಮಾತಾಡಿಸುತ್ತಿರುವಳು. ನೀನೊಮ್ಮೆ ಮಾತಾಡಲಾರೆಯಾ? ಇದೇಕೆ ನನ್ನಲ್ಲಿ ಕೋಪಿಸಿ ಕೊಂಡಿ ರುವೆ? ಇಗೋ! ಇಲ್ಲಿಯೇ ಉಲೂಪಿಯೂ ಇರುವಳು. ಒಮ್ಮೆ ಕಣ್ದೆರೆದು ನಿನ್ನ ಮುಗುಳ್ನಗೆಯಿಂದ ನಮ್ಮನ್ನು ತೃಪ್ತಿಪಡಿಸು.

ಅರ್ಜುನಾ! ನಿನ್ನ ಪ್ರೇಮವನ್ನು ಹೇಗೆ ಮರೆಯಲಿ? ನಿನ್ನ ಅಂಗ ಸಂಗ ಸಂಭೋಗದ ಸೌಖ್ಯವನ್ನೆಂತು ಮರೆಯಲಿ? ಪಾರ್ಥ! ಗಾಂಡೀವೀ! ನನ್ನನ್ನೇಕೆ ಬಿಟ್ಟುಹೋದೆ? ನಿನ್ನ ಅಣ್ಣ ಯುಧಿಷ್ಠಿರನಿಗೇನು ಹೇಳಲಿ? ನನ್ನ ಮಗನೇ ನಿನಗೆ ಮೃತ್ಯುವಾದನೆಂದು ಹೇಳಲೇ! ಕುಂತಿ ಸುಭದ್ರೆ ದ್ರೌಪದಿಯರಿಗೇನು ಉತ್ತರ ಕೊಡಲಿ? ಭೀಮನನ್ನು ಹೇಗೆ ಸಮಾಧಾನ ಪಡಿಸಲಿ! ನಿನ್ನನ್ನು ಕಳೆದು ನನ್ನ ಪ್ರಾಣವೆಂತು ನಿಲ್ಲುವುದು? ನಾನೂ ಅಳಿಯಬಾರದಿತ್ತೇ! ಹಾ ವಿಧಿಯೇ!—(ಮೂರ್ಛೆ ಹೋಗುವಳು. ಬಭ್ರು ವಾಹನ ಮತ್ತು ಉಲೂಪಿಯರು ಗಾಳಿ ಬೀಸುವರು; ಚೇತರಿಸಿ) ಅರ್ಜುನಾ! ಅರ್ಜುನಾ! ಅರ್ಜುನಾ! (ಮೇಲೆ ಬಿದ್ದು) ನನ್ನೊಡೆಯಾ! ಇಲ್ಲೇ ಇರು ವೆಯಾ? ನನ್ನನ್ನು ಬಿಟ್ಟು ಹೋಗಬೇಡ. ನಾನೂ ಬರವೆನು; ನಾನೂ ಬರುವೆನು. ಈ ಪಾಪಿ ಚಾಂಡಾಲಿಯನ್ನು ಬಿಟ್ಟು ಹೋಗಬೇಡ. ನಾ ನೇ—ನಾನೇ—ನಿನ್ನ ಮರಣಕ್ಕೆ ಕಾರಣಳಾದೆನು...ಹಾ! ದುರ್ದೈವವೇ!

ಬಭ್ರುವಾಹನ—ಅಮ್ಮಾ! ನೀನೇಕೆ ಜ್ಞಾನಶೂನ್ಯಳಂತೆ ವರ್ತಿಸುವೆ? ನಿನ್ನೆ ಆತನು ಹೆಮ್ಮೆಯಿಂದ ನಿನ್ನನ್ನು ವೇಶ್ಯೆಯೆಂದೂ, ನನ್ನನ್ನು ವಿಟಪುರುಷನ ಮಗನೆಂದೂ ಮದೋನ್ಮತ್ತನಾಗಿ ಕರೆದುದು ಮರೆತೆಯೇ!

ಚಿತ್ರಾಂಗದೆ—ಪಿತೃದ್ರೋಹಿ! ಸಾಕು, ಸಾಕು. ಏನಂದೆ? ಬಾಯ್ಮುಚ್ಚು. ನಿನ್ನಂಥ ಪಾಪಿಯು ಭೂಲೋಕದಲ್ಲಿರಲಾರನು. ತನ್ನ ಜನ್ಮದಾತನನ್ನೇ ಸಂಹರಿಸಿದ ಪುತ್ರನು ಭೂಮಿಯಲ್ಲಿ ಜನಿಸಿದರೇನು? ಇಲ್ಲದಿದ್ದರೇನು? ನನ್ನ ಪತಿಯನ್ನಗಲಿ, ನಿಮಿಷವಾದರೂ ಜೀವಿಸಿರಲಾರೆನು. ಆ ನಿನ್ನ ಖಡ್ಗದಿಂದ ನನ್ನ ತಲೆಯನ್ನೂ ಕತ್ತರಿಸಿಬಿಡು-ಪಿತೃದ್ರೋಹಿ!....

ಬಭ್ರುವಾಹನ—ಮಾತೆಯೆ! ನಾನೆಂದೂ ನಿನ್ನ ಮಾತನ್ನು ಮೀರಿ ದವನಲ್ಲ. ಈ ಸಂಘಟನೆಗೆ ಅರ್ಜುನನೇ ಕಾರಣನು. ಅವನ ಕರ್ಮ ಫಲವೇ ಅವನಿಗೆ ಪರಿಣಾಮವನ್ನುಂಟುಮಾಡಿತು.

ಚಿತ್ರಾಂಗದೆ—ಛೆ! ಪಾಪಿ! ನೀನು ಕಾರಣನಲ್ಲವೇ! ನಿನ್ನ ತಂದೆ ಯನ್ನು ಕೊಲ್ಲಲು ನೀನಲ್ಲವೇ ಕಾರಣನು? ಇನ್ನು ನಿನ್ನೆದುರಿನಲ್ಲಿ ನಾನುಳಿ ದಿರಲಾರೆನು. ನನ್ನನ್ನೂ ಸಂಹರಿಸು.

ಬಭ್ರುವಾಹನ—ಮಾತೆಯೇ! ನಿನಗೆ ಹುಚ್ಚು ಹಿಡಿದಿದೆಯೇನು?

ಈ ಘಟನೆಗೆ ನಾನೆಷ್ಟು ಕಾರಣನೋ ಅಷ್ಟೇ ಅರ್ಜುನನೂ ಕಾರಣನು; ಇವೆಲ್ಲಕ್ಕೂ ವಿಧಿಯೇ ಮೂಲಕಾರಣವು. ಆದರ ಲಿಖಿತದಂತಲ್ಲವೇ ಇಂಥ ಪ್ರಸಂಗವೊದಗಿದುದು.

ಚಿತ್ರಾಂಗದೆ—ಪಿತೃದ್ರೋಹಿ! ಪಿತೃಘಾತಕ! ಸಾಕು ಸಾಕು; ಬಾಯ್ಮುಚ್ಚು. ನಿನ್ನಂಥ ಪುತ್ರನು ನನ್ನುದರದಲ್ಲಿ ಜನಿಸುವುದಕ್ಕಿಂತ ನಾನು ಬರೇ ಬಂಜೆಯಾಗಿದ್ದಿದ್ದರೆ ಎಷ್ಟೋ ಲೇಸಿತ್ತು!

ಬಭ್ರುವಾಹನ—(ಅಡ್ಡ ಬಿದ್ದು) ಅಮ್ಮಾ! ನಿನ್ನ ಕಠಿಣವಾದ ಮಾತುಗಳನ್ನು ಕೇಳಿ ನನ್ನ ಅಂಗಾಂಗಗಳೆಲ್ಲವೂ ಸಿಡಿದು ಹೋಗುವಂತಿವೆ. ನನ್ನ ಮೇಲೆ ವ್ಯರ್ಥವಾಗಿ ದೋಷಾರೋಪಣೆ ಮಾಡುತ್ತಿರುವೆ. ಆದರೆ, ರಾಜಧರ್ಮದಂತೆ ನಾನು ನಡೆದಿರುವೆನು; ಪರಿಣಾಮವೇನೋ ಒಳ್ಳೆಯದಾಗಲಿಲ್ಲ. ಇಗೋ! ನಿನ್ನ ಸಲುವಾಗಿ ಯಾವ ಕೆಲಸವನ್ನಾದರೂ ಮಾಡುವೆನು. ನಿನಗೆ ಸುಖವನ್ನುಂಟುಮಾಡಲು ಎಷ್ಟೋ ಕಷ್ಟಗಳನ್ನು ಸಹಿಸಲಿಕ್ಕೆ ಸಿದ್ಧನಾಗಿರುವೆನು. ನಿನ್ನ ಸುಖಕ್ಕೆ ಅಡ್ಡ ಬಂದಿರುವುದಾದರೆ ಇಗೋ! ಈಗಲೇ ನನ್ನ ತಲೆಯನ್ನು ಕತ್ತರಿಸಿ ಬಿಡುವೆನು.

ಉಲೂಪಿ—ಮಗೂ! ಸುಮ್ಮನಿರು. ಇದೆಲ್ಲವೂ ದೈವಿಕ ಮಾಯೆ! ಅಕ್ಕಾ! ನಿನ್ನ ಮಗನನ್ನೇಕೆ ನಿಂದಿಸುವೆ? ಇದೆಲ್ಲವೂ ಆವುದೋ ಪಾಪಿಗ್ರಹದ ಆವಿರ್ಭಾವದ ಮಹತ್ಕ್ರಿಯೆಯು; ಎಲ್ಲವೂ ಲೀಲೆಯಿಂದಲೇ ನಡೆಯುವುವು. ಈಗ ನಮ್ಮನ್ನು ಪರಮಾತ್ಮನೇ ಕಾಪಾಡಬೇಕು. (ದೃಷ್ಟಿಸಿ ನೋಡಿ) ನಮ್ಮ ಪ್ರಾಣಪ್ರಿಯನು ಇನ್ನೂ ಜೀವಂತನಾಗಿರಬಹುದು. ಈ ವಿಷಯಗಳನ್ನೆಲ್ಲಾ ಪುಂಡರೀಕನೆಂಬ ಮಂತ್ರಿಯಿಂದ ತಿಳಿದುಕೊಳ್ಳೋಣ.

ಬಭ್ರುವಾಹನ—ಆ ಪುಂಡರೀಕನು ಯಾರು?

ಉಲೂಪಿ—ಆತನೇ ನನ್ನ ತಂದೆಯ ಮಂತ್ರಿಯು. ನನಗೆ ವಿಪತ್ತಿನಲ್ಲಿ ನೆರವಾಗುವೆನೆಂದು ನನ್ನ ಲಗ್ನಕಾಲದಲ್ಲಿ ಅಭಯಪ್ರದಾನವಿತ್ತಿರುವನು. ಇದೋ ಇಲ್ಲಿಯೇ ಬರುತ್ತಿರುವನು. (ಪುಂಡರೀಕನು ಪ್ರವೇಶಿಸಿ)

ಪುಂಡರೀಕ—ಮಗು! ಮಂಗಳವಾಗಲಿ ನಾನಾಗಲೇ. ನಿನ್ನ ವಿಪತ್ತನ್ನು ತಿಳಿದು ಹೊರಟುಬಂದಿರುವೆನು. ಅಮ್ಮಾ! ಚಿತ್ರಾಂಗದೆ! ದುಃಖಿಸಬೇಡ. ಇವೆಲ್ಲವೂ ಮಾಯೆಯ ದುರ್ನಿವಾರವಾದ ಸಂಘಟನೆ.

ನಿಮ್ಮ ಗಂಡನಿಗೆ ಗಂಗಾದೇವಿಯು ಶಾಪವಿತ್ತುದರಿಂದ ಆತನು ಶಕ್ತಿಗುಂದಿ ದೀರ್ಘ ಮೂರ್ಛಾಗತನಾಗಿರುವನು. ನಾಗಲೋಕದಲ್ಲಿರುವ ಸಂಜೀವನ ಮಣಿಯನ್ನು ತಂದಾತನ ಹೃದಯದ ಮೇಲಿಟ್ಟರೆ ಅವನು ಚೇತ್ವಿತನಾಗುವನು.

ಚಿತ್ರಾಂಗದೆ—ಆ ಸಂಜೀವ ಮಣಿಯೆಲ್ಲಿರುವುದು?

ಪುಂಡರೀಕ—ಉಲೂಪಿಯ ತಂದೆಯಾದ ಆದಿಶೇಷನಲ್ಲಿರುವುದು

ಬಭ್ರುವಾಹನ—ಹಾಗಾದರೆ ನಾನೇ ಹೋಗಿ ಅದನ್ನು ತರುವೆನು.

ಉಲೂಪಿ—ತಡೆ. ತಡೆ. ಮಗೂ! ನೀನು ಇನ್ನೂ ಚಿಕ್ಕವನು. ನಾಗಲೋಕ ಪ್ರವೇಶವು ಮನುಷ್ಯರಿಗಸಾಧ್ಯವು. ದಾರಿಯಲ್ಲಿ ಸಹಸ್ರ ಹೆಡೆಯುರಗಗಳು ಪಹರೆ ಮಾಡುತ್ತಿರುವುವು. ಅವುಗಳ ಬಾಯಿಂದ ಹೊರಡುತ್ತಿರುವ ಹಾಲಾಹಲವು ಸೂರ್ಯನನ್ನೇ ಭಸ್ಮೀಕರಿಸುವುದು.

ಬಭ್ರುವಾಹನ—ಈ ಖಡ್ಗಕ್ಕೆ ಆ ಉರಗಗಳು ಎಣೆಯೇ?

ಉಲೂಪಿ—ಎಣೆಯಿಲ್ಲದೆ ಏನು? ನಿನ್ನಂಥ ಸಹಸ್ರ ಬಭ್ರುವಾಹನರನ್ನು ಒಮ್ಮೆಂದೊಮ್ಮೆ ನುಂಗಿ ಬಿಡುವಂಥ ಮಹೋರಗಗಳು ನಾಗರಾಜಧಾನಿಯಾದ ಭೋಗವತಿಯಲ್ಲಿರುವುವು. ಆದ್ದರಿಂದ ಈ ಪುಂಡರೀಕನನ್ನೇ ಕಳುಹಿಸಿ ಅದನ್ನು ತರಿಸೋಣ.

ಪುಂಡರೀಕ—ಅಮ್ಮಾ! ಹಾಗಾದರೆ ನಾನೇ ಹೋಗುವೆನು. ಈ ಮೂಲಿಕೆಯು ರಸವನ್ನು ಆ ದೇಹಗಳ ಮೇಲೆ ಸವರಿದರೆ ಅವರ ಕಾಂತಿಯು ಕೆಡದು. ನೀವೆಲ್ಲರೂ ಇಲ್ಲಿಯೇ ಕುಳಿತುಕೊಂಡಿರಿ.

---

# ದೃಶ್ಯ ೧೨

## [ನಾಗಲೋಕ, ಆದಿಶೇಷನ ಅರಮನೆ, ಸಭಾಸ್ಥಾನ]

[ನೃತ್ಯ ಗೀತಾದಿಗಳು ನಡೆಯುವುವು. ಆದಿಶೇಷನು ಸಿಂಹಾಸನದಲ್ಲಿ ಕುಳಿತಿರುವನು. ಮಂತ್ರಿ ಪುಂಡರೀಕ ಧೃತರಾಷ್ಟ್ರ ಸಭಾಸದರು ಕುಳಿತಿರುವರು]

ಚಾರಕ—(ಪ್ರವೇಶಿಸಿ ಓಡಿಬಂದು, ನಮಸ್ಕರಿಸಿ) ಜೀಯಾ! ಇಂದು ಘಾತವಾಯಿತು. ಧೃತರಾಷ್ಟ್ರನನ್ನು ಸೋಲಿಸಿ ಬಭ್ರುವಾಹನನು ತನ್ನ ಬಾಣಗಳಿಂದ ಸರ್ಪಕುಲವನ್ನೇ ಧ್ವಂಸಮಾಡುತ್ತಲಿರುವನು

ಆದಿಶೇಷ —ಹಾಗೆಯೇ ಮಾಡಲಿ. ನಾನೆಷ್ಟೋ ಸಾರಿ ನಿಷ್ಪಕ್ಷಪಾತ ದಿಂದ ನಿಮಗೆಲ್ಲಾ ಹೇಳಿದರೂ ನೀವು ನನ್ನ ಮಾತಿಗೆ ಬೆಲೆಕೊಡದೆ ಚಂಡಿ ಹಿಡಿದು ಮಾನವರಿಗೆ ಸಂಜೀವನ ಮಣಿಯನ್ನು ಕೊಡಬಾರದೆಂದು ಹೇಳಿ ಪುಂಡರೀಕನನ್ನು ಬರಿಗೈಯ್ಯನ್ನಾಗಿ ಕಳುಹಿಸಿದಿರಿ. ಈಗ ನಿಮ್ಮ ಹೆಮ್ಮೆಗೆ ತಕ್ಕ ಪ್ರತಿಫಲವನ್ನು ಪಡೆಯಿರಿ.

ಆದಿಶೇಷ—ಮಂತ್ರಿಯೇ! ನೀನು ತ್ವರೆಯಾಗಿ ಹೋಗಿ ಆ ಬಭ್ರುವಾಹನನನ್ನು ಆಸ್ಥಾನಕ್ಕೆ ತಕ್ಕ ಸನ್ಮಾನದಿಂದ ಕರ ತಾ.

ಪುಂಡರೀಕ—ಅಪ್ಪಣೆ; (ಹೋಗುವನು)

ಆದಿಶೇಷ—ನಿಮ್ಮಂಥ ಕುಲಕಂಟಕರು ಇರುವುದರಿಂದಲೇ ನಮಗಿಂಥಾ ಅನರ್ಥಗಳು ಆಗಾಗ ಸಂಭವಿಸುತ್ತಿರುವುವು. ಪರೋಪಕಾರವು ಮಹಾ ಶ್ರೇಯೋದಾಯಕವೆಂದು ಸಂಜೀವನ ಮಣಿಯನ್ನು ಕೊಟ್ಟು ಪುಂಡರೀಕನ ಸಂಗಡ ಕಳುಹಿಸಿದ್ದರೆ ಶ್ರೀಕೃಷ್ಣ ಪರಮಾತ್ಮನು ಸಂತೋಷಪಟ್ಟು ನಮ್ಮನ್ನು ಸುರಕ್ಷಿತವಾಗಿ ಕಾಪಾಡುವನೆಂದು ಎಷ್ಟೋ ಬಾರಿ ಹೇಳಿದರೂ ನನ್ನ ಮಾತುಗಳನ್ನು ನಿಮ್ಮ ಕಿವಿಗಳಿಗೆ ಬೀಳಗೊಡಿಸದೆ ಹಟ ಸಾಧಿಸಿ ಪುಂಡರೀಕನನ್ನು ಬರಿಯ ಕೈಯಲ್ಲಿ ಕಳುಹಿಸಿದಿರಿ. ಅದಕ್ಕೆ ತಕ್ಕ ಶಿಕ್ಷೆಯು ಈಗ ನಿಮಗೆ ನಿಮ್ಮಿಂದಲೇ ಒದಗಿದೆ.

[ಮಂತ್ರಿ-ಬಭ್ರುವಾಹನರ ಪ್ರವೇಶ]

ಪುಂಡರೀಕ—ಹೀಗೆ-ಹೀಗೆ-ಬರಬೇಕು.

ಆದಿಶೇಷ—(ಇಳಿದು ಬಂದು) ತಮ್ಮಾ! ಯುದ್ಧದಿಂದ ಬಹಳ ಬೇಸತ್ತಿರುವೆ. ಈ ಪೀಠವನ್ನಲಂಕರಿಸು.

ಬಭ್ರುವಾಹನ—ಆದಿನಾಥನೇ! ನನಗೆ ವಿಶ್ರಮಿಸಲು ಸಮಯವೇ ಇಲ್ಲವು. ಕಾಲವಿಳಂಬಮಾಡಿದರೆ ಘಾತವಾಗುವ ಪ್ರಸಂಗವಿರುವುದು. ನನ್ನ ತಂದೆಯೂ ತಮ್ಮನೂ ಮಡಿದುಬಿದ್ದಿರುವರು. ಅವರೆಲ್ಲರಿಗೂ ಜೀವದಾನ ಕೊಡಬೇಕಾಗಿದೆ. ಆದ್ದರಿಂದ ನಿನ್ನ ಬಳಿಯಲ್ಲಿರುವ ಸಂಜೀವನ ಮಣಿಯನ್ನು ಕೊಟ್ಟು ಕೃತಾರ್ಥನಾಗು. ನಿನ್ನ ಕೀರ್ತಿಯು ಹೆಚ್ಚುವುದು.

ಆದಿಶೇಷ—ಮಗೂ! ಸ್ವಲ್ಪ ತಡೆ; ನಾನದನ್ನು ತಂದುಕೊಡುವೆನು. (ಒಳಗಿಂದ ತರುವನು) ಮಗೂ! ಇಗೋ! ಇದನ್ನು ಎಚ್ಚರದಿಂದ

ಕೊಂಡೊಯ್ಯು; ಮತ್ತು ಅದನ್ನು ಜಾಗ್ರತೆಯಾಗಿ ಹಿಂದಕ್ಕೆ ಕಳುಹಿಸಿ ಕೊಡು.

ಬಭ್ರು—ಆದಿಶೇಷನೇ, ನನಗೀ ಸಂಜೀವನ ಮಣಿಯನ್ನು ಕೊಟ್ಟು ತುಂಬಾ ಉಪಕಾರ ಮಾಡಿಡೆ. ಅದಕ್ಕಾಗಿ ನಿನ್ನನ್ನು ಎಷ್ಟು ಹೊಗಳಿದರೂ ಸಾಲದು. ಆದರೆ ನನ್ನ ಬಾಣಗಳಿಂದ ನಿಮಗೆಲ್ಲಾ ವ್ಯಥೆಯುನ್ನುಂಟು ಮಾಡಿದೆ. ಆದಕ್ಕಾಗಿ ನನ್ನನ್ನು ಕ್ಷಮಿಸಬೇಕು. ಇನ್ನು ನಾನು ಹೊರಡುವೆನು.

ಆದಿಶೇಷ—ಹಾಗೆಯೇ ಆಗಲಿ.

## ಯುದ್ಧರಂಗ

[ಚಿತ್ರಾಂಗದೆ ಉಲೂಪಿಯರು ಅರ್ಜುನನ ದೇಹದ ಬಳಿ ವ್ಯಾಕುಲಚಿತ್ತರಾಗಿ ಕುಳಿತಿರುವರು. ಕೃಷ್ಣನೂ ರುಕ್ಮಿಣಿಯೂ ಮಾತನಾಡುತ್ತ ಬರುವರು.]

ರುಕ್ಮಿಣಿ—ಪ್ರಿಯಾ, ನೀನು ಹೇಳುವುದೆಲ್ಲಾ ನಿಜವೇ?

ಕೃಷ್ಣ—ನಾನೆಂದಾದರೂ ನಿನ್ನ ಸಂಗಡ ಸುಳ್ಳಾಡಿರುವೆನೇ? ಸುಭದ್ರೆಯ ಮಂಗಲ ಸೂತ್ರವು ಭೂಮಿಗೆ ಬಿದ್ದ ಕ್ಷಣವೇ ಅರ್ಜುನನು ಭೂಶಯ್ಯಾಗತನಾದನು.

ರು.—ಹಾಗಾದರೆ ದ್ರೌಪದಿಯ ಕನಸಿನಲ್ಲಿ ಅರ್ಥವಿರಬೇಕು.

ಕೃ.—ಅಹುದು;ಅವಳ ಕನಸಿನಅರ್ಥವು ನನಗಾಗಲೇಹೊಳೆಯಿತು.

ರು.—ಧರ್ಮರಾಯನಿಗೀ ವಿಚಾರವು ತಿಳಿದಿರುವುದೇ?

ಕೃ.—ತಿಳಿದಿದ್ದರೂ ಇರಬಹುದು. ಯಜ್ಞಕುಂಡದ ಅಗ್ನಿಯು ನೊಂದಿಕೋದಾಗ ಬಲವಾದ ಸಂಶಯವು ಅವನ ಮನಸ್ಸಿನಲ್ಲೂರಿರಬೇಕು. ಇಲ್ಲವಾದರೆ ನನ್ನನ್ನಿಲ್ಲಿಗೆ ಅಟ್ಟುತಿದ್ದನೇ?

ರು.—ಹಾಗಾದರೆ ಅಶ್ವಮೇಧ ಯಾಗವು ಸಮಾಪ್ತಿಯಾದಂತೆಯೇ!

ಕೃ.—ಯಾಕೆ! ದೈವಪ್ರೇರೇಪಣೆಯು ಅಂತಿರಲಾರದು.

ರು.—ಇನ್ನೆಂತಿರಬಹುದು?

ಕೃ.—ಬಾ, ಅದನ್ನೇ ನೋಡೋಣ (ಮುಂದೆಹೋಗುವರು) ಅಗೋ ಅಲ್ಲಿ ಕುಳಿತಿರುವವಳೇ ಚಿತ್ರಾಂಗದೆಯು. ಅವಳ ಬಳಿಯಲ್ಲಿರುವವಳೇ ಉಲೂಪಿಯು. ಆ ಚಿತ್ರಾಂಗದೆಯ ಮಗನೇ ಬಭ್ರುವಾಹನ (ಮುಂದೆ ಹೋಗುವರು.)

(ಚಿತ್ರಾಂಗದೆ ಉಲೂಪಿಯರು ಎದ್ದು ನಮಸ್ಕರಿಸಿ) ಮಹಾತ್ಮ, ನಿಮ್ಮ ಬರೋಣದಿಂದ ನಾವು ಧನ್ಯರಾದೆವು.

ಕೃ.—ಮಂಗಳವಾಗಲಿ.

ಚಿ.—ಮಹಾತ್ಮನೇ ನಿನ್ನ ವಚನವು ಫಲಿಸಲಿ. ನಮ್ಮ ಅದೃಷ್ಟವು ಈ ರೀತಿಯಲ್ಲಿ (ಅರ್ಜುನನ ಕಡೆ ಕೈತೋರಿ) ಪರಿಣಮಿಸಿದ ನಂತರ ನಮಗೆ ಮಂಗಳವೆಂತಹುದು.

ಕೃ.—ಮನುಷ್ಯರು ಕರ್ಮಾಧೀನರು; ದೈವೇಚ್ಛೆಯನ್ನು ಮೀರಲು ಶಕ್ತರಲ್ಲ. (ಅರ್ಜುನನ ಮುಖದ ಮೇಲಿನ ಬಟ್ಟೆಯನ್ನು ಎತ್ತಿ, ನಿಟ್ಟುಸಿರು ಬಿಡುವನು. ರುಕ್ಮಿಣಿಯ ಮುಖದಲ್ಲಿ ವ್ಯಸನವು ತೋರುವುದು.)

[ಬಭ್ರುವಾಹನ ಧಾವಿಸಿ ಬರುವನು]

ಬಭ್ರು—ಅಮ್ಮಾ, ಇಗೋ, ಇಗೋ ಸಂಜೀವ ಮಣಿ. ಇದನ್ನು ವಕ್ಷಸ್ಥಳದಲ್ಲಿಟ್ಟ ಕೂಡಲೆ ಚೈತನ್ಯವುಂಟಾಗುವುದು. (ಸುತ್ತ ನೋಡಿ) ಇದಾರು?

ಚಿ.—ಮಗೂ, ಮಹಾಸಂತೋಷ! ಇವನೇ ಶ್ರೀಕೃಷ್ಣಪರಮಾತ್ಮನು ಅವರು ರುಕ್ಮಿಣೀದೇವಿಯರು.

ಬಭ್ರು—(ಒಡನೆ ಅವರ ಪಾದಗಳಿಗೆರಗಿ) ತಮ್ಮ ದರ್ಶನದಿಂದ ನಾನು ಧನ್ಯನಾದೆನು.

ಕೃ. ರು.—ಮಗೂ, ಆಯುಷ್ಮಂತನಾಗು.

ಚಿತ್ರಾ—ಮಗೂ, ಆ ಸಂಜೀವನ ಮಣಿಯನ್ನು ಶ್ರೀಕೃಷ್ಣನಿಗೆ ಕೊಡು ಅವನೇ ನಮ್ಮ ಮನೋಭೀಷ್ಟವನ್ನು ನೆರವೇರಿಸಲು ಶಕ್ತನು.

ಬಭ್ರು—ಮಹಾತ್ಮಾ ಇಗೋ, ಈ ಸಂಜೀವನ ಮಣಿಯು ನಿನ್ನ ಹಸ್ತಸ್ಪರ್ಶದಿಂದ ಪಾವನವಾಗಬೇಕು. ನೀನೇ ನಮ್ಮಪ್ಪರಿಗೆ ಚೈತನ್ಯ ನೀಯಲು ಶಕ್ತನು. ತಡಮಾಡದೆ ನಮ್ಮ ಕೋರಿಕೆಯನ್ನು ಈಡೇರಿಸು.

ಕೃ.—ಬಭ್ರುವಾಹನ, ನಿನ್ನ ಶೌರ್ಯವನ್ನು ನನಗೆ ಹೊಗಳಲಶಕ್ಯವು. ಗಂಧರ್ವ-ಯಕ್ಷ-ಕಿನ್ನರರಿಗೂ ಪ್ರವೇಶಿಸಲಿಕ್ಕಸಾಧ್ಯವಾದ ನಾಗರಾಜಧಾನಿಯಿಂದ ಸಂಜೀವನ ಮಣಿಯನ್ನು ಸಂಪಾದಿಸಿದ ನೀನೇ ಲೋಕೈಕವೀರ. ಇಗೋ ನಿನ್ನಿಚ್ಛೆಯಂತೆ ಮಾಡುವೆನು (ಅರ್ಜುನನ ವಕ್ಷಸ್ಥಳದಲ್ಲಿ ಸಂಜೀವನ ಮಣಿಯನ್ನಿಡುವನು.)

ಅರ್ಜುನ -(ಎಚ್ಚತ್ತು) ಕೃಷ್ಣಾ! ಕೃಷ್ಣಾ! ನನ್ನನ್ನಗಲಿದೆಯಾ!

ಕೃಷ್ಣ—(ಅರ್ಜುನನನ್ನೆಬ್ಬಿಸಿ ಕುಳ್ಳಿರಿಸಿ) ಅರ್ಜುನಾ, ಇಗೋ ನಾನಿಲ್ಲಿಯೇ ಇರುವೆನು.

ಅರ್ಜುನ—(ಕಣ್ದೆರೆದು ಕೃಷ್ಣನನ್ನು ನೋಡುವನು) ಇದೇನು? ನಾನೆಲ್ಲಿರುವೆ? ಸ್ವರ್ಗದಲ್ಲಿಯೋ? ಸ್ವಪ್ನದಲ್ಲಿಯೋ?

ಕೃ—ಮರ್ತ್ಯಲೋಕದಲ್ಲಿ. ನಿನ್ನ ಪುತ್ರನ ರಾಜಧಾನಿಯಲ್ಲಿ.

[ಅರ್ಜುನನು ಸುತ್ತಲೂ ನೋಡಿ, ಬಭ್ರುವಾಹನನನ್ನು ಕಂಡು ನಾಚಿಕೊಳ್ಳುವನು.]

ಕೃ.—ಅರ್ಜುನಾ ಏಳೇಳು! (ಅರ್ಜುನನು ಏಳುವನು) ಮೂರ್ಖತನದಿಂದ ಈ ಫಲವನ್ನು ಹೊಂದಿದೆ. ಇನ್ನೇಕೆ ಹಂಬಲ! ಮಿಂಚಿಹೋದ ಕಾರ್ಯಕ್ಕೆ ಚಿಂತಿಸಿ ಫಲವಿಲ್ಲ ಅದೂ ಅಲ್ಲದೆ ದೈವೇಚ್ಛೆಯನ್ನು ಮೀರಲು ಮಾನವರಿಂದ ಅಸಾಧ್ಯವು. ನೀನಿನ್ನು ವ್ಯಸನಪಡಬೇಡ. ಇಗೋ, ನಿನ್ನ ಪುತ್ರನಾದ ಈ ಬಭ್ರುವಾನನು ನಿನ್ನ ಬಿರುದನ್ನಳಿಸಿ ತನ್ನ ಪ್ರತಾಪವನ್ನು ಪ್ರಕಟಗೊಳಿಸಿ ಸಾರ್ಥಕನಾಗಿರುವನು. ನಿನ್ನ ಮಗನಿಂದ ಅವಮಾನ ಹೊಂದಿದೆಯೆಂದು ಲಜ್ಜೆಪಡದೆ ಅವನನ್ನು ಗೌರವಿಸು. ಈ ಪತಿವ್ರತಾ ಶಿರೋಮಣಿಯರಾದ ಚಿತ್ರಾಂಗದೆ ಉಲೂಪಿಯುವರನ್ನು ಸ್ವೀಕರಿಸು. ನೀನು ಭೂಸಂಚಾರ ಮಾಡಿದಾಗ ಇವರೀರ್ವರನ್ನೂ ವರಿಸಿದುದು ಸತ್ಯವು.

ಅರ್ಜುನ—(ಚಿತ್ರಾಂಗದೆ ಉಲೂಪಿಯರೊಡನೆ) ಚಿತ್ರಾ, ನಾನು ಮಹಾ ಅಪರಾಧವನ್ನು ಮಾಡಿದೆನಲ್ಲವೇ!

ಚಿತ್ರಾ. ಉ—ಇಲ್ಲ. ಕರ್ಮವೇ ನಮ್ಮನ್ನಿಂತು ಕಾಡಿತು. ನಿನ್ನ ಅಪರಾಧವೇನೂ ಇಲ್ಲ.

ಬಭ್ರು—ಅಪ್ಪಾ, ನನ್ನ ಅಪರಾಧಗಳನ್ನು ಕ್ಷಮಿಸು. (ಅರ್ಜುನನ ಕಾಲಿಗೆರಗುವನು.)

ಅರ್ಜುನ—(ಕೈ ಹಿಡಿದೆತ್ತಿ) ಮಗೂ ಎದ್ದೇಳು, ಅಪರಾಧವು ನಿನ್ನದಲ್ಲ; ನನ್ನದು. ಅಜ್ಞಾನದಿಂದ ದುಡುಕಿ ಆಗಿ ಹೋದ ಕಾರ್ಯಕ್ಕೆ ಇನ್ನು ಚಿಂತಿಸಲಾರೆನು. ಮಗು ವೃಷಕೇತು ಎಲ್ಲಿರುವನು?

ಕೃ—ಇದೋ ಇಲ್ಲಿರುವನು. (ವೃಷಕೇತುವನ್ನು ಎಬ್ಬಿಸುವನು)

ವೃಷಕೇತು—(ಎದ್ದು ಅತ್ತಿತ್ತ ನೋಡುತ್ತ:ರೋಷದಿಂದ) ಇಗೋ ಇಗೋ ಇನ್ನೊಂದಸ್ತ್ರ! (ಬಿಲ್ಲನ್ನು ಬಗ್ಗಿಸುವನು)

ಅರ್ಜುನ—ಮಗೂ ತಡೆ. ಇದಾರು ನೋಡು, ಇವನೇ ನಿನ್ನಣ್ಣ ಬಭ್ರುವಾಹನ. ಅವನಿಗೆ ಮಹಾಪರಾಧವನ್ನು ಮಾಡಿರುವೆವು. ನಿನ್ನ ಬಿಲ್ಲನ್ನತ್ತಿಸೆ (ಬಿಲ್ಲನ್ನು ಕಿತ್ತಿಸೆವನು. ವೃಷಕೇತು ಬಭ್ರುವಾಹನನನ್ನು ನೋಡುವನು.)

ಬಭ್ರು—(ವೃಷಕೇತುವನ್ನು ತಬ್ಬಿಕೊಂಡು) ತಮ್ಮಾ. ನನ್ನಿಂದ ಅನರ್ಥವಾಯಿತು. ನನ್ನನ್ನು ಕ್ಷಮಿಸಲಾರೆಯಾ!

ವೃಷ—(ನಗುತ್ತ) ಅಣ್ಣಯ್ಯ, ನಿನ್ನನ್ನು ಕ್ಷಮಿಸಲೇನಿರುವುದು? ಮಾಯೆಯಿಂದ ಸುತ್ತಲ್ಪಟ್ಟು ನಾವು ಹುಚ್ಚರಂತೆ ನಟಿಸಿ ನಿನಗೆ ಅವಮಾನ ಮಾಡಿದುದಕ್ಕೆ ನೀನೇ ನಮ್ಮನ್ನು ಕ್ಷಮಿಸಬೇಕು. ನಮ್ಮ ನೀಲಧ್ವಜರೆಲ್ಲಾ ಎಲ್ಲಿರುವರು?

ಬಭ್ರು—ನಾನಾಗಲೇ ಅವರನ್ನು ಕರೆಯಕಳುಹಿರುವೆನು. ಅಗೋ, ಇಲ್ಲಿಯೇ ಬರುತ್ತಿರುವರು.

[ನೀಲಧ್ವಜ ಪ್ರದ್ಯುಮ್ನ ಇತ್ಯಾದಿಗಳ ಪ್ರವೇಶ.]

ನೀಲ. ಇತ್ಯಾದಿಯರು—(ಶ್ರೀಕೃಷ್ಣನಿಗೆರಗಿ) ನಿನ್ನ ದರ್ಶನದಿಂದ ನಾವು ಪಾವನರಾದೆವು.

ಕೃ—ಮಂಗಳಮಸ್ತು.

ನೀ—ಬಭ್ರುವಾಹನ, ನಿನ್ನ ಮಹೋದಾರ್ಯಕ್ಕೆ ನಾವು ಕೃತಜ್ಞರಾಗಿದ್ದೇವೆ.

ಬಭ್ರು—ಯಾಕೆ? ಕಾರಾಗೃಹದನುಭವವಿತ್ತುದಕ್ಕೆ!

ನೀ—ಅಲ್ಲ; ವಿಮುಕ್ತರನ್ನಾಗಿ ಮಾಡಿದುದಕ್ಕೆ!

ಕೃ—ಓ ಅದಾರು! ಸ್ತ್ರೀಯರು ಇತ್ತಕಡೆ ಬರುತ್ತಿರುವರು. ಅವರು ಸುರಕನ್ಯೆಯರಂತಿರುವರು.

ರು— ಮುಂದೆ ಬರುವವಳೇ ಗಂಗಾದೇವಿಯು.

[ಗಂಗಾ ಜ್ವಾಲೆಯರ ಪ್ರವೇಶ.]

ಎಲ್ಲರೂ ನಮಸ್ಕರಿಸುವರು.

ಗಂಗಾ—ಮಂಗಳವಾಗಲಿ. ಕೃಷ್ಣಾ, ಈ ಅರ್ಜುನನಿಗೆ ವಿಪತ್ತ ನ್ನೊದಗಿಸಿದವಳು ನಾನೇ. ನನ್ನ ಪುತ್ರ ಭೀಷ್ಮನನ್ನು ಶರಗಳಿಂದ ಕೊಚ್ಚಿ ಕೊಂದುದಕ್ಕೆ ತಕ್ಕ ಶಾಸನವಾಯಿತಲ್ಲವೇ!

ಕೃ—ಗಂಗಾದೇವಿಯೇ ತಮ್ಮ ಕೋಪವೇ ಅರ್ಜುನನಿಗೆ ಸಂಕಷ್ಟ ಗಳನ್ನೊದಗಿಸಿತೆಂದು ನಾನು ತಿಳಿದೆನು. ಈ ಭೂಲೋಕದಲ್ಲಿ ಜನ್ಮ ವೆತ್ತಿದ ಪ್ರತಿಯೊಬ್ಬ ಮಾನವನು ತನ್ನ ಕರ್ಮದಿಂದ ಅನೇಕಾನೇಕ ಸಂಕಷ್ಟಗಳನ್ನನುಭವಿಸುವನು. ಅಂತೆಯೇ ತಮ್ಮ ಪುತ್ರರೂ ದೇಹವನ್ನು ನೀಗಿದರು. ಆವರ ಮರಣಕ್ಕೆ ಅರ್ಜುನನು ಕಾರಣನಲ್ಲವು........ದೈವ ಪ್ರೇರೇಪಣೆಯಿಂದಲೇ ಆ ಕಾರ್ಯವಾಯಿತು ಆದ್ದರಿಂದ ಅರ್ಜುನನನ್ನು ತಾವು ಕ್ಷಮಿಸಬೇಕು. ಅರ್ಜುನಾ, ನಿನ್ನ ಮುತ್ತಜ್ಜಿಯ ಕ್ಷಮಾಪಣೆ ಯನ್ನು ಬೇಡು.

ಅರ್ಜುನ—ತಾಯೇ, ನನ್ನಪರಾಧಗಳನ್ನು ಕ್ಷಮಿಸು. (ಗಂಗೆಯ ಪಾದಗಳಿಗೆರಗುವನು.)

ಗಂಗಾ—ಅರ್ಜುನಾ, ನಿನ್ನ ಮೇಲೆ ನನಗೀಗ ದ್ವೇಷವಿಲ್ಲ. ನನ್ನ ಭೀಷ್ಮನನ್ನು ಸ್ವರ್ಗದಲ್ಲಿ ಅನುನಿತ್ಯವೂ ನೋಡುತ್ತಿರುವೆನು. ನಿನಗೆ ವಿಪತ್ತೊದಗಿತೆಂದು ತಿಳಿದು ಧಾವಿಸಿ ಬಂದೆನು. ಅಷ್ಟರಲ್ಲೇ ದೈವಿಕ ಮಾಯೆಯಿಂದ ನೀನು ಪುನರ್ಜನ್ಮವನ್ನು ಹೊಂದಿರುವೆ. ಇನ್ನು ನೀನು ಶ್ರೇಯೋವಂತನಾಗಿ ಬಾಳು. ಇಂದಿನ ದಿನವು ನಿನ್ನ ಜನ್ಮದ ಅತಿ ವಿಶೇಷವಾದ ದಿನವು. ನಿನ್ನ ಪ್ರಾಣವನ್ನೂ ಸೈನ್ಯವನ್ನೂ ಉಳಿಸಿಕೊಂಡೆ ಯಲ್ಲದೆ ಮಹಾ ಪರಾಕ್ರಮಿಯಾದ ನಿನ್ನ ಮಗನ ಗುರುತು ಹಚ್ಚಿದೆ. ಬಹುಕಾಲದಿಂದ ನಿನ್ನಾಗಮನವನ್ನು ನಿರೀಕ್ಷಿಸಿ ನಿತ್ಯವೂ ನಿನ್ನನ್ನೇ ಧ್ಯಾನಮಾಡುತ್ತ ತಮ್ಮ ಪೂರ್ಣಾನುರಾಗವನ್ನು ನಿನ್ನ ಮೇಲೆ ಸುರಿದು ಕಾಲಕಳೆಯುತ್ತಿದ್ದ ನಾರಿಶಿರೋಮಣಿಯರಾದ ಈ ಚಿತ್ರಾಂಗದೆ ಉಲೂ ಪಿಯರಿಗೆ ಹೊಸ ಜೀವ ಕಳೆಯು ಇಂದು ಮೂಡಿತು. ಅವರಲ್ಲಿ ಪೂರ್ಣಾ ನುರಕ್ತನಾಗಿ ಅವರೊಡನೆ ಸುಖದಿಂದ ಬಾಳು. ಅಲ್ಲದೆ ಈ ಬಾಲವೀರ

ನನ್ನು ಕರೆದುಕೊಂಡು ದಿಗ್ವಿಜಯಕ್ಕೆ ಹೋಗು. ನಿನಗೆ ಪೂರ್ಣ ಜಯ ವುಂಟಾಗುವುದು. ಆದರೆ ಅಬಲೆಯರಿಗೂ, ಅನಾಥರಿಗೂ ನಿರಪರಾಧಿ ಗಳಿಗೂ ಪೀಡೆಯನ್ನುಂಟುಮಾಡಬೇಡ.

ನೀಲಧ್ವಜ! ಇವಳಾರು ಗೊತ್ತಿದೆಯೇ? ಇವಳೇ ನಿನ್ನ ಜ್ವಾಲೆಯು. ಹೆಸರಿಗೆ ತಕ್ಕಂತೆ ಕಾರ್ಯದಲ್ಲೂ ಪ್ರವೃತ್ತಳಾದವಳು. (ನೀಲಧ್ವಜನು ಆಶ್ಚರ್ಯದಿಂದ ನೋಡುವನು) ಮಾಹಿಸ್ಮತೀ ಪುರದಲ್ಲಿ ನೀನವಳನ್ನು ತ್ಯಜಿಸಿ ಬಂದನಂತರ ನನ್ನಲ್ಲಿಯೇ ಬಂದುಳಿದು ದೇವಾಂಶಸಂಭೂತೆಯಾ ಗಿರುವಳು. ಈ ಸಾಧ್ವೀಮಣಿಯಿಂದಲೇ ಈ ಪ್ರಸಂಗವೆಲ್ಲವುಂಟಾಯಿತು. ಇಂಥಾ ಹಠಸಾಧನೆಯ ಮಹಿಳೆಯರಿಂದಲೇ ಭರತಖಂಡದ ಶ್ರೇಯಸ್ಸು ಕಳೆಯೇರುತ್ತಿರುವುದು. ನೀಲಧ್ವಜ, ಇವಳನ್ನು ಸ್ವೀಕರಿಸು.

[ಜ್ವಾಲೆಯನ್ನು ನೀಲಧ್ವಜನಿಗೊಪ್ಪಿಸುವಳು—ಅದೃಶ್ಯಳಾಗುವಳು.]

ಕೃಷ್ಣ—ಅರ್ಜುನಾ! ನೀನು ಧನ್ಯ! ಇಂತಹ ವೀರನಾದ ಬಭ್ರು ವಾಹನನನ್ನು ಹೆತ್ತ ಚಿತ್ರಾಂಗದೆಯೂ, ಜನ್ಮವಿತ್ತ ಅರ್ಜುನನೂ ಧನ್ಯರು. ಇಂದಿನ ಆನಂದೋತ್ಸವಕ್ಕೆ ಪಾರವೇ ಇಲ್ಲ. ಅಮ್ಮಾ! ಜ್ವಾಲೆ, ನಿನ್ನ ಹಠಸಾಧನೆಯ ವೃತ್ತಾಂತ ತಿಳಿದು ಮಹಾ ಸಂತೋಷಪಡುತ್ತೇನೆ. ಈ ನಾಟಕವೇ ನಿನ್ನದೆಂದರೆ ಅತಿಶಯೋಕ್ತಿಯಾಗಲಾರದು. ನೀಲಧ್ವಜ! ಇಂಥಾ ವೀರಪತ್ನಿಯನ್ನು ಕೈಹಿಡಿದ ನೀನೂ, ಜನ್ಮವಿತ್ತ ಭಾರತಿಯೂ ಧನ್ಯರೇ ಸರಿ. ಇಂಥಾ ವೀರಪತ್ನಿಯರಿದ್ದರೆ ಭಾರತೀಯ ಶ್ರೇಯಸ್ಸು ಉಜ್ವಲಿತವಾಗುವುದರಲ್ಲಿ ಸಂಶಯವಿದೆಯೇ?

ಬಭ್ರುವಾಹನ, ಈ ಸಂಜೀವನ ಮಣಿಯನ್ನು ನನ್ನ ಗರುಡನ ಮೂಲಕ ನಾಗರಾಜನಿಗೆ ಕಳುಹುವೆನು. ನಾನು ಇನ್ನು ಹಸ್ತಿನಾವತಿಗೆ ಹೋಗಬೇಕಾಗಿದೆ. ಅರ್ಜುನನ ವೃತ್ತಾಂತವನ್ನು ತಿಳಿದು ಬರಬೇಕೆಂದು ಧರ್ಮರಾಯನು ಕಳುಹಿಸಿಕೊಟ್ಟನು. ಇನ್ನು ನಿನ್ನ ತಾತನ ಅಶ್ವಮೇಧ ಯಾಗಕ್ಕೆ ಅಡ್ಡಿಯೇನೂ ಬರಲಾರದು.

ಬಭ್ರುವಾಹನ—ಮಾಪಯ್ಯನವರೇ, ತಮ್ಮ ಬರೋಣದಿಂದ

ಮಹೋಪಕಾರವಾಯಿತು. ತಾವೆಲ್ಲರೂ ನನ್ನ ಅರಮನೆಗೆ ಬಂದು ನನ್ನ ಆತಿಥ್ಯವನ್ನು ಸ್ವೀಕರಿಸಬೇಕು.

ಕೃಷ್ಣ—ಹಾಗೆಯೇ ಆಗಲಿ. ನಮಗೀಗ ಕಲ್ಯಾಣವನ್ನುಂಟು ಮಾಡಿ ನಮ್ಮ ಆನಂದಕ್ಕೆ ಪಾರವೇ ಇಲ್ಲದಂತೆ ಮಾಡಿದ ಪರಮಾತ್ಮನನ್ನು ಧ್ಯಾನಿಸೋಣ. (ಎಲ್ಲರೂ ಹೋಗುವರು.)

॥ ಸಂಪೂರ್ಣಂ ॥

---

# ‘ಕಿರಿಯರ ಪ್ರಪಂಚ’ದ ಪ್ರಕಟಣೆಗಳು

| | | | | |
|---|---|---|---|---|
| ಸ್ವತಂತ್ರ ಜೀವನೋಪಾಯ | (ಕೆ. ಹೊನ್ನಯ್ಯ ಶೆಟ್ಟಿ) | 0 | 3 | 0 |
| ಸಂಶಯ ಪಿಶಾಚಿ | (ಕೆ. ಕೆ. ಶೆಟ್ಟಿ) | 0 | 8 | 0 |
| ನಾಡ ಕತೆಗಳು | (ಸಂಕಲನ) | 0 | 3 | 0 |
| ಕುಶಲವ | (ಕೆ. ಕೆ. ಶೆಟ್ಟಿ) | 0 | 5 | 0 |
| ಕಾವ್ಯ ಸಾಮ್ರಾಜ್ಯ | (ಕವಿತಾ ಸಂಗ್ರಹ) | 1 | 0 | 0 |
| ಮಧುವನ | (ಕಥಾಸಂಗ್ರಹ) | 3 | 8 | 0 |
| ಮುಂದಿನ ದೇವರು | (ಕೆ. ಕೆ. ಶೆಟ್ಟಿ) | 0 | 3 | 0 |
| ವ್ಯಭಿಚಾರಿಣಿ ಯಾರು | ( ,, ) | 0 | 12 | 0 |
| ಹೆಂಡ್ತಿ ಗಂಡನಾದರೆ | ( ,, ) | 0 | 4 | 0 |
| ಪುರುಷ ವಧು | ( ,, ) | 0 | 4 | 0 |
| ಸನ್ಯಾಸಿಯ ಸೋಗಿನಲ್ಲಿ | ( ,, ) | 0 | 8 | 0 |
| ನಂದಾ ದೀಪ | (ಕೊರಡ್ಕಲ್ ಶ್ರೀನಿವಾಸ ರಾವ್) | 0 | 10 | 0 |
| ದೇಶಭಕ್ತ | (ಕೆ. ಕೆ. ಶೆಟ್ಟಿ) | 1 | 4 | 0 |
| ಪ್ರೇಮ ವಿಜಯ | ( ,, ) | 1 | 0 | 0 |
| ರಂಗಭೂಮಿ | (ಎಸ್. ವೆಂಕಟರಾಜ) | 0 | 8 | 0 |
| ಸೇವಾಪಥ | (ಎಸ್. ಎಲ್ ಸುಬ್ರಹ್ಮಣ್ಯಂ) | 0 | 8 | 0 |
| ನಾರೀ ಹೃದಯ | ( ,, ) | 0 | 14 | 0 |
| ಭಾರತೀಯ ಕತೆಗಳು | (ಕೊರಡ್ಕಲ್ ಶ್ರೀನಿವಾಸ ರಾವ್) | 0 | 10 | 0 |
| ಪ್ರಕಾಶ | (ಸರಸ್ವತಿ ಬಾಯಿ ರಾಜವಾಡೆ) | 2 | 4 | 0 |
| ಮೂರು ಪ್ರಹಸನಗಳು | (ಕೊರಡ್ಕಲ್ ಶ್ರೀನಿವಾಸರಾವ್) | 0 | 14 | 0 |
| ನಗೆ ಸೋಟೆಗಳು | (ಕೆ. ವಿಟ್ಠಲ ಶೆಣೈ, ಬಿ. ಎ. ಎಲ್.ಟಿ.) | 0 | 14 | 0 |
| ಅನ್ನದೇವರು ಮತ್ತು ಇತರ ಕತೆಗಳು | (ಕಯ್ಯಾರ ಕಿಂಞಣ್ಣ ರೈ) | 1 | 0 | 0 |
| ಭಾರತದಲ್ಲಿ ಜಾತಿಭೇದ | (ಎಸ್. ಎಲ್. ಸುಬ್ರಹ್ಮಣ್ಯಂ) | 1 | 0 | 0 |
| ವಿಷ್ಣುವಿನ ದಶಾಪರಾಧಗಳು ಅರ್ಥಾತ್ ದಶಾವತಾರಗಳು | (ಎಂ. ವಿ. ಹೆಗ್ಡೆ) | 0 | 12 | 0 |
| ಆಕಾಶಗಂಗೆ | (ಎಸ್ ವೆಂಕಟರಾಜ) | 1 | 12 | 0 |

ಹೊಸಕೆರೆ ಚಿದಂಬರಯ್ಯನವರ



# ಗೀತೆಯ ಕೈಗನ್ನಡಿ

ನವಭಾರತ ಪುಸ್ತಕ ಭಂಡಾರ, ಉಡುಪಿ

N, P, U, P, I, C, S, K, 72/1000, 31-5-46.